ರಕ್ಷಾಪುಟ ಬಂಧನ :— ಶ್ರೀ ಬಿ. ಯಸ್. ತುಂಬರಮಟ್ಟಿ

---

## — ಪರಿವಿಡಿ —

...ಹಿರಿಮೀನು ಕಿರುಮೀನನ್ನು ನುಂಗಿಯೇ ದೇಹವನ್ನು ಪುಷ್ಟಗೊಳಿಸಲು ...ಸುತ್ತದೆ. ಒಳಿತು, ಕೆಡುಕುಗಳ ವಿವೇಚನೆಯಿರದೆ ಪ್ರಾಕೃತಿಕವಾ...ಂದು ನಿಯಮವಿದು. ಭೂಜೀವಿಗಳಲ್ಲಾದರು ಹೀಗೆಯೇ. ನಾಯಿಗೆ ...ಯಿಯೇ ಹಗೆ. ಬುದ್ಧಿ, ವಿವೇಕಗಳನ್ನು ತಳೆದವನೆಂಬ ಪ್ರಶಂಸೆಯನ್ನು ...ದುಕೊಂಡನಾದರು ಮನುಷ್ಯನ ಬಾಳಿಂದಲು ಈ ರೀತಿಯ ಪ್ರವೃತ್ತಿ ತೊಲ...ಲ್ಲ. ಅಲ್ಲು ಸಹ ಜಾತಿಗೆ ಜಾತಿಯೇ ವೈರಿ. ವಿದ್ಯಾನ್ವಿತವಾದ ಪಥದಲ್ಲಿ ...ಂಬರಿಯಬೇಕೆಂದು ಬಯಸಿರುವವರಿಗೆ ವಿದ್ಯಾವಂತರೆಂದು ಜನಾದರವನ್ನು ...ಳಿಸಿಕೊಂಡಿರುವವರಿಂದಲೇ ಬಗೆಬಗೆಗಳ ಅಸಹಕಾರ. ಗಮನದ ಮಾತಿರಲಿ ...ಉಲ್ಲೋತ್ಸಾಹವನ್ನೇ ಚಿವುಟುವಂಥ ಪ್ರತಿಕ್ರಿಯೆಗಳು. ಸಾಹಿತ್ಯದ ಸಲ್ಲಕ್ಷ್ಮಿ...ಯನ್ನೇ ಮುದುಡಿಸುವಂಥ ವಾತಾವರಣ. ಹತ್ತಿರದೆಯ ನರರಲ್ಲೇ ನವಗ್ರಹ ಗಳಿಲ್ಲಿ ಸೇರಿಕೊಂಡಿವೆಯೆಂಬುದನ್ನು ಹಿಂದಿನೊಂದು ಲಘುಕೃತಿಯಲ್ಲಿ ಮಂಡಿತ ಗೊಳಿಸಿದೆ. ಮಿಕ್ಕವರ ಮಾತಿರಲಿ ಯಜಮಾನನ ಅಲ್ಪತೆಯ ಸಂಪರ್ಕ ದಿಂದಾಗಿಯೋ, ತಮ್ಮದೇ ಸ್ವಭಾವದಿಂದಾಗಿಯೋ, ಹ... ...ಯ ಗಳಲ್ಲಿ ಪಡಿಯಚ್ಚು ತಯಾರಿಸುವವನಿಂದ ತೊಡಗಿ ಮುದ್ರಕ, ರಕ್ಷಾಪುಟ ಬಂಧಕರ ಮೂಲಕ ಸಹ ವ್ಯವಹಾರ ನಡೆಸಿದವನಿಗೆ "ಈತನೂ ಇಷ್ಟು ಪುಟಗಳ ಪುಸ್ತಕ ಮುದ್ರಿಸುತ್ತಾನೆ" "ಹೋ ! ಮತ್ತೆ ಮತ್ತೆ ಈತ ಹೊತ್ತಗೆಗಳನ್ನು ಪ್ರಕಟಿಸುತ್ತಾನೆ" ಎನ್ನುವಂತಹ ರೀತಿಗಳಲ್ಲಿ ಪ್ರಬಲವಾದ ಗ್ರಹದೃಷ್ಟಿಗಳೇ ಬಡಿಯುವಂಥ ಪ್ರಸಂಗಗಳು. ಇವುಗಳಿಂದ ಮತ್ತಷ್ಟು ಸಂಕಟಗಳ ದಟ್ಟಣೆ. ಲಘುಕೃತಿಯೊಂದನ್ನು ಬಿಡುಗಡೆಗೊಳಿಸುವಲ್ಲಿಯು ಎಷ್ಟೊಂದು ನೋವು, ಕಾವುಗಳಿಗೆ ಸಮಾಜ ಗುರಿಪಡಿಸಿತೆಂದು ಸುತ್ತಣ ಹಲವರಿಗೆ ಅರ್ಥವಾಗು ವುದಿಲ್ಲ. ಹೊರದ ಕಾರ್ಯಗಳಷ್ಟೇ ಅವರಿಗೆ ಗೋಚರಿಸುತ್ತಿರುವುದು. ತಿಳಿವು ಗಳ ಪ್ರಾಪಂಚಿಕ ಮುಖಗಳಿಗೆ ಮಾತ್ರವೇ ಅವರಿಂದ ಮಾನ್ಯತೆ. ತನ್ನಾತ್ಮವೇ ಮಾತ್ರವಲ್ಲ, ... ...ಲುವುಗಳು ಹಾಗೆಯೇ ದೂರದವರವು ... ಪ್ರಕಾರಾಂತರಗಳಲ್ಲಿ ರೂಪಿಸುವುದ... ...ವೆಯೆಂದು ಸತ್ಯಪಾ ತರಂಗ ಪ್ರಕಾ... ...ಷ್ಟಿಗೆ ಪ್ರತ್ಯಕ್ಷವಾಗಿ,





ಪರೋಕ್ಷವಾಗಿ ನೆರವೀಯುವವರ ಬಗ್ಗೆ ಸಹ ಹಲವರು ಕರುಬತೊಡಗುವ
ಕಂಡಾಗ ಜಗತ್ತಿನಲ್ಲಿನ ಮಾಯೆಯ ಬಗ್ಗೆ ಅತೀವವಾದ ವಿಸ್ಮಯವುಂಟ
ತ್ತದೆ. ಸಾಹಿತಿ, ಕಲಾವಿದರ ಬಾಳ್ವಿಗೆಳಿಗೆ ಇಂಥವು ಸಹ ಮಹತ್ತರವ
ಅಡಚಣಿಗಳಾಗುತ್ತವೆ. ಶಿಕ್ಷಿತರಿಂದ ಸಾಂಸ್ಕೃತಿಕ ಪರಿಭರ್ಯಗಳಿಗೆ ಪ್ರೋತ್ಸಾ
ಲಭ್ಯವಾಗುವುದು ವಿಶೇಷ ಸಂದರ್ಭವೆನ್ನಿಸುವ ಕಾಲವಿಂದು ಬಲಿತಿದೆ. ಹೆ
ಪರಿಚಯದೊಡನೆ ವ್ಯವಹರಿಸಿದರೆ ಮಾತ್ರ ಹೆಚ್ಚಿನ ಲೇಖಕರಾದರು ಸಹಕಾರ
ಸಿದ್ಧರಾಗುವುದು. ಪ್ರಕಾಶಕರೆನಿಸಿದವರನ್ನು ಸಾರಿದಾಗಂತೂ "ಸಿಗ
ಮತ್ತೀನೌದಾರ್ಯ. ಬೇರೆ ಹಾದಿ ಬಿಟ್ಟು ಹಿಡಿ ನಮ್ಮ ಪ್ರಚಾರದ ತೂರ್ಯ
ಎಂದು ಘೋಷಿಸುವವರೇ ಹೆಚ್ಚು. ಸತ್ಯಕಿರಣಗಳನ್ನು ದುರ್ಭಾವ, ದುರ್ವಿಚಾ
ಗಳಿಂದ ಕವಿಸುವ ಕಾರ್ಯಗಳನ್ನು ನಡೆಸುತ್ತಿರುವವರು ಸಹ ಮೂಲವಿರು
ವಾದ ದಿಕ್ಕಿನಲ್ಲಿ ಸಾಗುತ್ತ ಸದ್ಯ ಪ್ರಕಾಶಕರ ಸಾಲಿನಲ್ಲಿ ಸೇರಲು ಪ್ರಾರಂಭಿಸಿ
ದ್ದಾರೆ. ಗದಗಿನ ಶ್ರೀ ಮಾರುತೀ ಪ್ರಕಾಶನದವರ ಮಾತುಗಳು ಮಾತ್ರ
ಇವಕ್ಕೆಲ್ಲ ಭಿನ್ನಗತಿ ತಳೆದುವು. ಅರುವತ್ತು ಪುಟಗಳ ಮುದ್ರಣ ಪೂರೈಸಿ
ಆರು ತಿಂಗಳ ಬಳಿಕ ಮತ್ತೊಮ್ಮೆ ಭೇಟಿಯಾಗುವ ತನಕವು ರಾಜ್ಯಾದ್ಯಂತ
ಪ್ರಸಾರವುಳ್ಳ ಪ್ರಕಟಣೆಗಳ ವಿಸ್ತೃತಿಯನ್ನವರು ಹೊಂದಿರುವರೆಂಬುದು
ಕನಸು, ಕಲ್ಪನೆಗಳಲ್ಲು ಸುಳಿದಿರಲಿಲ್ಲ. ಸ್ಥಳ ಪರಿಚಯ ತಳೆದಿರದವರು ಗುರು
ತಿಸಲಾರದ ಮೂಲೆಯಲ್ಲಿ ಒಂದೆರಡು ಯಂತ್ರಗಳು ಹಾಗು ಕೆಲವರು
ಪಡಿಯಚ್ಚು ತಯಾರಿಸುವವರನ್ನು ಮಾತ್ರ ಹೊಂದಿರುವರೆಂದಷ್ಟೇ ಮತಿ ಗ್ರಹಿಸಿ
ದ್ದುದು. ಆ ಮೇಲಾದರು ನಾಲ್ಕು ನುಡಿ ಬರೆದುದು ಸ್ವೀಕೃತ ಕಾರ್ಯ
ವನ್ನವರು ಆಶ್ವಾಸನೆಗನುಸಾರ ಪೂರೈಸಿಕೊಟ್ಟುದರಿಂದ. ಯಜಮಾನರಾದ
ಶ್ರೀ ಬಿ. ವಿ. ಅಂಗಡಿಯವರು ತಿಳುವಳಿಕೆಗಳ ಪ್ರಸಾರದಲ್ಲಿ ಹಲವು ದಶಕಗಳ
ಪಥಾನುಭವ ಹೊಂದಿದವರಿದ್ದು ವ್ಯಕ್ತಿ, ವ್ಯಕ್ತಿಗಳಲ್ಲಿ ಇಂದತೀವ ವಿರಳವಾಗು
ತ್ತಿರುವ ಆದರೆ ದೇಶಾಭಿವೃದ್ಧಿಗೆ ನಿರಂತರವಾಗಿ ತಾರಕಮಂತ್ರಗಳಿರುವ ಕಾಲ,
ವಚನ ಹಾಗು ಶ್ರಮಗಳ ನಿಷ್ಠೆಯನ್ನು ಸ್ತುತ್ಯ ಪ್ರಮಾಣದಲ್ಲಿ ಮೈಗೂಡಿಸಿ
ಕೊಂಡವರಿದ್ದಾರೆ. ಸತ್ಯ, ಶಿವ, ಸೌಂದರ್ಯ ಹಾಗು ರಸಗಳ ಕಡೆಗೆ ಅವರಲ್ಲಿ
ಗೌರವಸಹಿತವಾದ ಪ್ರಜ್ಞೆಗಳಿವೆ. ಹಲವು ಸುಂದರ ವಿನ್ಯಾಸಗಳೊಡನೆ ಅವರ
ಪ್ರಕಟಣೆಗಳ ಹೊದಿಕೆಗಳಾದರು ವಿದ್ಯಾರ್ಥಿಗಳಲ್ಲಿ ಹಾಗು ಮಿಕ್ಕವರಲ್ಲಿ ಸಹ

ಸೌಂದರ್ಯ, ನಿರ್ಮಾಲಿನ್ಯಗಳ ಬಗೆಗೆ ಶ್ರದ್ಧೆಯನ್ನು ಜಾಗೃತಪಡಿಸಿ ಬೆಳೆಸುವಂತಿವೆ. ದೇವಾಗಾರಗಳು, ವೀರರು, ಪ್ರಜಾನಾಯಕರು, ಬೆಡಗಿನ ಕಾರ್ಯಗಳು ಪ್ರಾಕೃತಿಕ ಚೆಲುಗಳನುಕರಣೆಗಳ ನೆರವಿಗಿಂತ ವಿಭಿನ್ನವಾಗಿ ಇವುಗಳಲ್ಲಿನ ವ್ಯಕ್ತಿತ್ವದಲ್ಲೇ ಜನಿಸಿದ ಸ್ವತಂತ್ರ ಬೌದ್ಧಿಕ ಕಲ್ಪನೆಗಳು ಸರ್ವರಿಗೂ ಸಂತೊಷಪ್ರದವಾಗಿವೆ. ಅಶಿಕ್ಷಿತರು ಕೂಡ ಇವುಗಳಿಂದ ಪ್ರಯೋಜನಗಳನ್ನು ಪ್ರಾಪ್ತಗೊಳಿಸಿಕೊಳ್ಳಬಹುದಾಗಿದೆ. ಚಲಚ್ಚಿತ್ರಗಳೊಂದಿಗೆ ರಷ್ಯದ ಸಾಹಿತ್ಯ, ಲಂಕೇಶ, ತರಂಗಾದಿ ಪ್ರತಿಕೆಗಳು ಸಹ ಸಾವಿರಾರು ಸಂಖ್ಯೆಗಳಲ್ಲಿ ಜನಮನಗಳನ್ನು ವಶೀಕರಿಸಲು ದುರಾಕರ್ಷಣೆಗಳನ್ನೇ ತಮ್ಮ ಪ್ರಬಲಾಸ್ತ್ರವಾಗಿ ಧರಿಸಿ ತೊಡಗಿರುವಾಗ ಅಂಥವುಗಳೊಂದಿಗೆ ಪರಿಪುಷ್ಟ ಪ್ರಕಾರಗಳಿಂದಿವು ಸ್ಪರ್ಧಿಸುತ್ತಿವೆ. ಈ ವಿಧದ ಸತ್ಫಲಗಳ ಮುಂದೆ ತೆರಬೇಕಾದ ಬೆಲೆಗಳೆಲ್ಲ ಅತ್ಯಲ್ಪ. ಬಣ್ಣದ ಹೊದಿಕೆಯನ್ನು ಮನಪ್ರೊಲ್ಲದಿದ್ದರು ಶ್ರೀ ಬಿ. ವಿ. ಅಂಗಡಿಯವರು ಬಲವಂತಪಡಿಸಿ ತಮ್ಮ ನಿರ್ಮಾಣಗಳ ವೈವಿಧ್ಯಮಯ ಮೇಲ್ಮಟ್ಟದೊಡನೆ ಈ ಕೃತಿ ಸಹ ಥುಸುಮಾದರು ಪರಿಶೋಭಿ ತಳೆದಿರಲೆಂದು ರಕ್ಷಾಪತ್ರಗಳ ವ್ಯಯವನ್ನು ತಾವೇ ವಹಿಸಿಕೊಂಡರಲ್ಲದೆ ರೂ. ೫೦ ರಷ್ಟು ತಗ್ಗಿಸಿದ್ದಾರೆ. ಈ ಅಲ್ಪಮತಿ ರಚಿಸಿದ ಧನಾಲಯ ಸಂಬಂಧಿತ ಲಘುಲೇಖನವನ್ನು ತಳೆದಿರುವ ಪುಸ್ತಕ ಮಾರುಕಟ್ಟೆಯಲ್ಲಿ ಹೆಚ್ಚಿನ ಯಶಸ್ಸನ್ನು ದೊರಕಿಸಿದುದರಿಂದ ಸಂತಸದೊಡನೆ ಸ್ವಂತೇಚ್ಛೆಯಿಂದವರು ಹೀಗೆಸಗಲು ಮುಂಬಂದರು. ಇದಕ್ಕೆ ಕಾರಣರಾದ ಹಿನ್ನೆಲೆಯಲ್ಲಿನ ಧನಾಲಯಗಳನ್ನು ಥೊಗಲೆಳೆಸಿರುವ ಸಾವಿರಾರು ತರುಣರಿಗೆ ವಿನಮ್ರ ಪ್ರಣಾಮಗಳನ್ನು ಸಲ್ಲಿಸುತ್ತೇನೆ. ಶ್ರೀ ಅಂಗಡಿಯವರ ಯೋಗ್ಯ-ಸಹಕಾರದಿಂದಾಗಿಯೇ ವಸ್ತು ವಿಸ್ತೃತಿಗೊಳಿಸಿ ಕೆಲವು ಪ್ರತಿ ಹೆಚ್ಚಿಸಿ ಕಡಿಮೆ ನೀಡಿರುವ ಹಲವರಿಗೆ ತಲಪಿಸಲು ಸಾಧ್ಯವಾಗಿದೆ. ಇವರ ಪುತ್ರ ಶ್ರೀ ಸುರೇಶರಾದರು ತಿಳಿವಿನ ಮಂದಿರದೊಬ್ಬ ಶ್ರದ್ಧಾವಂತ ಪೂಜಕರು. ಶಾರದೆಯಡಿಗೆ ಗೌರವ ನಿವೇದಕರು. ಹೀಗಿರುವವರ ಸೇವೆಗಳೇ ದೃಷ್ಟಿಗೆ ನಿಲ್ಕುಕದಾದಾಗ ಸೀಮಾತೀತನಾದ ಪರಮಾತ್ಮನ ಕುರಿತು ಇಚ್ಛಾನುಗುಣವಾಗಿ ಗಳೆಹುವವರನ್ನು ಕಂಡು ಸೋಜಿಗ ಪಡಬೇಕಾಗಿದೆ. ಜನಕೋಟಿ ರೂಪೀ ಜನಾರ್ದನ ಇವರಿಗೆಲ್ಲ ಅಧಿಕಾಧಿಕ ಸನ್ಮಂಗಲ ತರಲೆಂದು ಹಾರೈಸುವೆ.

ಗದಗ ಇತಿ, ನಮನಗಳು

೪-೫-೮೫  ಯಂ. ರಾಧಾಕೃಷ್ಣ

**— ಈ ಕಡೆ ಹಿರಿದೆನ್ನಿಸುವ ಹಿತ, ಅನ್ಯೆಡೆ ಮೇರೆದಾಟಿದ ದುಃಖ —**

ಪ್ರಪಂಚದ ಎಲ್ಲ ವಸ್ತುಗಳಲ್ಲಿ ಹಾಗು ಜೀವಿಗಳಲ್ಲಿ ಚೇತವೆಂಬುದಿರುತ್ತದೆ. ಅದು ತೀವ್ರವಾಗಿಯಾಗಲೀ, ನಿಧಾನವಾಗಿಯಾಗಲೀ ಯಾವುದಾದರು ರೀತಿಯಲ್ಲಿ ಹಿತಾಹಿತಗಳನ್ನು ಮೀರಿದ ತನ್ನ ಮೂಲಭೂತವಾದ ಶೂನ್ಯ ಶೀಲವನ್ನು ಪ್ರಕಟಗೊಳಿಸುವ ಸನ್ನಿವೇಶಗಳನ್ನು ಸೃಜಿಸುತ್ತದೆ. ಸುತ್ತಣ ಪರಿಸರದಿಂದ ಎಷ್ಟೋ ವಸ್ತುಗಳನ್ನು ಪಡೆದು ಅವುಗಳ ಸೇವನೆಯಿಂದ ತಾತ್ಕಾಲಿಕ ಸುಖಗಳನ್ನು ನೀವು ಹೊಂದುತ್ತೀರಿ. ಆದರೆ ಶಾಶ್ವತ ತೋಷಗಳ ಪ್ರಾಪ್ತಿಗಾಗಿ ವ್ಯಯಿಸಬಹುದಾಗಿದ್ದ ಸಮಯವನ್ನು, ಧನವನ್ನು, ಶಕ್ತಿಗಳನ್ನು ಅಷ್ಟೇ ಪ್ರಮಾಣದಲ್ಲವು ನಿರರ್ಥಕಗೊಳಿಸುತ್ತವೆ. ಮಿಥ್ಯಾಮೋದವನ್ನು ಪುಷ್ಟಗೊಳಿಸಿ ನಿಜವಾದ ಧನ್ಯತೆಯನ್ನು ಚಿವುಟುತ್ತವೆ. ಹೊರಗಿಂದ ಮದ್ದುಗಳು ಕಹಿಯಾಗಿ ತೋರಿದರು, ಹಿಂಸ್ರಕವೆನ್ನಿಸಿದರು ವ್ಯಕ್ತಿತ್ವದಲ್ಲಿ ಆಂತರಿಕ ಸ್ವಾಸ್ಥ್ಯವನ್ನು ಮೂಡಿಸುತ್ತವೆ. ಸತ್ಯಾನ್ವಿತವಾದ ತತ್ತ್ವಗಳಾದರು ಹೀಗಿರುತ್ತವೆ. ಉತ್ತಮ ಸಂತುಷ್ಟಿಗಳ ಬಗ್ಗೆ ಬಾಹ್ಯವಾಗಿ ನೀವು ಹೆಚ್ಚಿನ ಬೆಲೆಗಳನ್ನು ತೆರಬೇಕಾಗಿದ್ದರು ಆಂತರಿಕ ವಹಿವಾಟುಗಳಿಗವು ಯೋಗ್ಯವಾದ ಸಂಸ್ಕಾರಗಳಾಗುತ್ತವೆ. ಈ ವಿಧದ ಗುಣಗಳು ಚಾರಿತ್ರಿಕವಾಗಿಯಾದರು ಸುಳ್ಳಾಗಲಿಲ್ಲ. ಪಾಶ್ಚಾತ್ಯರು ನಮ್ಮ ದೇಶವನ್ನು ಹೊಕ್ಕು ಎರಡು ಶತಕಗಳನ್ನು ನೀರಿ ಆಳುವವರಾಗಿಲ್ಲಿ ನಿಂತು ಪರಂಪರಾಗತವಾದ ಜೀವನದಲ್ಲಿನ ಎಷ್ಟೋ ಮೂಢ ವಿಶ್ವಾಸಗಳನ್ನು ತೊಲಗಿಸಿದರು, ಪ್ರಾಬಲ್ಯ ಹೆಚ್ಚಿಸುತ್ತಿದ್ದ ಜಾತೀಯ ವ್ಯತ್ಯಾಸಗಳನ್ನು ಕುಗ್ಗಿಸಿದರು, ನೂರಾರು ರಾಜ್ಯಗಳಾಗಿ ಬೇರ್ಪಡೆ ಹೊಂದಿದ್ದ ರಾಷ್ಟ್ರದಲ್ಲಿ ಪ್ರಶಂಸನೀಯವಾದೊಂದು ಏಕತ್ವವನ್ನು ಸ್ಥಾಪಿಸಿದರು ಮುಂತಾಗಿ ನಾವು ಯೋಚಿಸುತ್ತೇವೆ. ಆದರೆ ವಾಸ್ತವಿಕವಾಗಿ ತಮ್ಮ ನಾಗರಿಕತೆಯೇ ವಿಸ್ತರಿಸಿದ ನವವ್ಯವಸ್ಥೆಗಳ ಮೂಲಕ ಮೊದಲಿಗಿಂತ ಸಾವಿರ ಪಟ್ಟು ಭೀಕರವಾದ ಬೌದ್ಧಿಕ ಅಪವಿಶ್ವಾಸಗಳನ್ನವರು ಬೇರೂರಿಸಿರುವುದು, ಹಿಂದಿನ ಜಾತೀಯ ಭೇದಗಳಿಗಿಂತ ನೂರಾರು ಮಡಿ ಪ್ರಾಬಲ್ಯಗಳ ಹೆಚ್ಚಳವಿರುವ ಅಪರಿಮಿತ ಅರ್ಥಾಂತರಗಳನ್ನು ಹರಡಿರುವುದು, ಭಯಕಾರಿ ಶೋಷಣಾನ್ವಿತ ಹಾಗು ದಾರಿದ್ರ್ಯಭರ ದುಸ್ಥಿತಿಗಳಿಗೆ, ದುಃಖಾಕ್ರಂದನಗಳಿಗೆ ಹೆದ್ದಾರಿಗಳನ್ನು

ಕಟ್ಟಿದುದು, ಬಿಡಗಿಗೆ ಮಾತ್ರ ಹೊರವೇಕತೆಯನ್ನು ರೂಪಿಸಿ ವ್ಯಕ್ತಿವ್ಯಕ್ತಿಯ ಜೀವನವನ್ನು ಕೂಡ ಅದೊಂದು ನೀಚ ಸ್ವಾರ್ಥ ಹಿಗ್ಗಿರುವ ರಾಜ್ಯವಾಗಿ ಪರಿವರ್ತಿಸಿ, ಅಗಣಿತ ವರ್ಗವಿಭೇದಗಳಲ್ಲಿ ಜಟಿಲವಾದ ಸ್ಪರ್ಧೆ, ಸಂಗ್ರಾಮ ಗಳ ಸನ್ನಿವೇಶಗಳನ್ನು ಪುಷ್ಟಗೊಳಿಸಿ ಆತ್ಮಿಕವಾದ ಏಕತೆಯನ್ನು ಭಗ್ನಪಡಿಸಿರು ವುದು ನಮ್ಮವರ ಗಮನಕ್ಕೆ ಸಿಲುಕುವಾಗ ಹಲವು ವರ್ಷಗಳೇ ದಾಟಿಯಾವು. ಹೊರದಿಂದವರು ಸರಿದಿದ್ದರು ಆಂತರಂಗಿಕ ಪ್ರಭಾವಗಳಿಂದ ಮತಿಗಳನ್ನೇ ದಾಸ್ಯಯುತವಾಗಿಸಿ ವಿಜೃಂಭಿಸುತ್ತಿದ್ದಾರೆ. ಪ್ರಾಪಂಚಿಕ ವಿಷಯಗಳ ಕೂಡಿಕೆ ಯಾದ ಹೊರತಿಳಿವುಗಳ ದಟ್ಟಣಿಯಿಂದ ಶಾಶ್ವತ ಸತ್ಯಗಳ ಜ್ಞಾನವನ್ನು ಮುದುಡಿಸಿದ್ದಾರೆ. ಕರಣಗಳನ್ನೆಲ್ಲ ಪೂರ್ತಿಯಾಗಿ ಬಹಿರ್ಮುಖಗೊಳಿಸಿ ಬದುಕಿನ ಮೂಲಪ್ರಜ್ಞೆಗಳನ್ನೇ ಕಂದಿಸಿದ್ದಾರೆ. ನಾನಾ ವಿಧಗಳ ಬಾಹ್ಯ ಸುಖ, ಸೌಕರ್ಯಗಳ ಪ್ರತಾಪಗಳಿಂದ ಮಾನಸಿಕ ಸಮ್ಮತ, ಶಾಂತಿಗಳ ದಿಕ್ಕಿಗೆ ಲಕ್ಷ್ಯವನ್ನೇ ಸೊರಗಿಸಿದ್ದಾರೆ. ನಶ್ವರ ಸಂಗತಿಗಳ ವೇಗಪೂರಿತ ಪ್ರಸಾರಗ ಳೊಡನೆ ಮೌಲ್ಯವತ್ತಾದ ವಿಚಾರಗಳನ್ನು ಹರಿಯುವ ನೀರಂತೆ ಸ್ತಬ್ಧಗೊಳಿಸಿ ದ್ದಾರೆ. ಬಹಿರ್ಧ್ವನಿಗಳ ಅಟ್ಟಹಾಸಗಳಿಂದ ಚೇತರವಗಳ ನೆಲೆಗಳನ್ನೇ ಹಿಸುಕಿದ್ದಾರೆ. ಇವೆಲ್ಲವುಗಳ ಬಗೆಗೆ ಸಂದರ್ಭಪ್ರೇರಿತಗಿದಾಗೆಲ್ಲ ಸತ್ಯಪಾತರಂಗ ಪ್ರಕಾಶನದ ಕೃತಿಗಳು ನವವ್ಯವಸ್ಥೆಯ ಪ್ರಭುಗಳಿಗರುಹಿವೆ. ಘಟನಾನ್ವಿತ ವಾಗಿಯೇ ಇವನ್ನು ವಿಶದಪಡಿಸುವ ಪ್ರಕಾರ ಆಂಗ್ಲರ ದೇಶ ಭಾರತದೇಕತೆ ಯನ್ನು ಮುರಿಯುವ ಸಂಚಿಗೆ ಬೆಂಬಲ ನೀಡುತ್ತಿರುವ ವಾರ್ತೆಗಳು ಸಹ ಸದ್ಯ ತಲಪುತ್ತಿದೆ. ಕಟುಕ ಕುರಿಯಾಶೆಯನ್ನು ಪೋಷಿಸುವುದು ಯಾಕೆಂಬುದನ್ನು ತಿಳಿಯುವ ಬುದ್ಧಿ, ವಿವೇಚನೆಗಳು ಸಿಕ್ಕರಲ್ಲಿ ಕೆಲವು ಮಂದಿಗಳಿಗಿಲ್ಲ. ಇನ್ನಾ ದರು ಪ್ರಜೆಗಳು ಎಚ್ಚರಗೊಳ್ಳುವುದು ಲೇಸೆಂದು ನಿವೇದನೆ.

ಸರಕಾರ ವೈಯುಕ್ತಿಕ ಸ್ವಾತ್ರ್ಯದವರನ್ನು ಕಾಡುವ ರೀತಿಗಳು

೪-೯-೮೨ ನೇ ದಿನಾಂಕದ ಸರಕಾರೀ ಪತ್ರ ಸಂಜ್ಞೆ ೨೬೧ ಎಂ. ಇ. ಎಸ್. ೮೨ ರ ಮೇರೆಗೆ ೩ ವರ್ಷ ಮೊದಲು ಪ್ರಕಟವಾದ "ರಾಜಕಾರಣಿ, ವ್ಯಾಪಾರಿ ಮತ್ತು ಸರಕಾರೀ ನೌಕರ" ಪುಸ್ತಕದ ೧೦೦ ಪ್ರತಿಗಳನ್ನು ಕೂಡಲೇ ಕಳಿಸುವಂತೆ ೧೬-೨-೮೫ ರಂದು ಸಾ ಗ್ರಂ. ನಿ. ಕರು ಆದೇಶ ನೀಡಿದ್ದಾರೆ. ಬದುಕಿನ ಅನಿವಾರ್ಯತೆಯಿಂದ ವಿಳಾಸ ಬದಲಿಸಬೇಕಾದಾಗ ಆ ಬಗ್ಗೆ ತಿಳಿಸಿ

ದರು ಗಮನಿಸಲು ಅವರಿಗೆ ಪುರುಸೊತ್ತಿಲ್ಲ. ಪ್ರತಿಗಳೆಲ್ಲ ಮುಗಿದಾಗ ಈ ಪತ್ರ ಕೈಸೇರಿದ್ದು ೨೯–೪–೮೫ ರಂದು. ಇದರರ್ಥವೇನೆಂದರೆ ಲೇಖಕ, ಪ್ರಕಾಶಕ ನಿರೀಕ್ಷಣಾಧ್ವರವನ್ನು, ಚಾತಕವ್ರತವನ್ನು ಕೈಕೊಂಡು ಇವರಾದೇಶ ಸಿಗುವ ವರೆಗೆ ಬಾಯಿಬಿಡುತ್ತ ಕಾದಿರಬೇಕೆಂದು. ಅಷ್ಟರಲ್ಲವನನ್ನು ಯಮರಾಜ ಕರೆದ್ಕೊಂಡ್ಹೋದನಾದರೆ ಅದನ್ನೇ ಹೆಚ್ಚಿನ ಪುಣ್ಯವೆನ್ನಬಹುದೇನೋ!. ನವನಾಗರಿಕತೆಯು, ನೂತನ ಶಿಕ್ಷಣ ಪೈರುಗಳಾದ ವೈಚಿತ್ರ್ಯಪೂರಿತ ವಿದ್ಯಮಾನಗಳಿಗೆ ಭೂಷಣಪ್ರಾಯವಾಗುವ ಸಂಗತಿಗಳಲ್ಲಿದನ್ನು ಶಿರೋರತ್ನಕ್ಕೆ ತುಲನೀಯವಾಗಿಸಬಹುದು. ಇದರೊಂದು ವಸ್ತುಸ್ಥಿತಿಯೆಂದರೆ ದೇವರಾಜ ಅರಸು ಅಥವಾ ಗುಂಡೂರಾಯರ ಕಾಲದಲ್ಲಿ ದಾಖಲಾತಿಯೊಂದಿಗೆ ಕಳಿಸಿದ ಪತ್ರಗಳಿಗಾದರು ಸರಕಾರದಿಂದ ಪ್ರತ್ಯುತ್ತರ ದೊರಕುತ್ತಿರಲಿಲ್ಲ. ಸದ್ಯ ಶ್ರೀ ಹೆಗ್ಡೆಯವರ ದೂರು ವಿಚಾರಣಾ ವಿಭಾಗ ಬರೀ ಕಾಗದಗಳಿಗು ಹಾಗೆಸಗುತ್ತಿದೆಯಲ್ಲದೆ ಸಂಬಂಧಿಸಿದವರೆಲ್ಲ ವಿಚಾರಜಡರಾಗಿ ಕುಂಭಕರ್ಣ ನಿದ್ರೆಯಲ್ಲೇ ಮಗ್ನತೆ ತಾಳಿದ್ದರು ಅಂಕುಶದಿಂದಲ್ಲದಿದ್ದರು ಕರಗಳಲ್ಲಾದರು ತಿವಿಯುತ್ತಿದೆ. ಎರಡು ಲಘು ಪ್ರಯತ್ನಗಳಿಗೆ ಇಷ್ಟು ಮುನ್ನಡೆ, ಈ ಬಗ್ಗೆ ಅಭಿನಂದನೆಗಳನ್ನು ಸಲ್ಲಿಸುವೆ.* ವೀಕ್ಷಣೆ ದ್ವಾರ—"ಯಾವಾಗ ನೋಡಿದರು ಬರೆಯುತ್ತಲೇ ಇರುತ್ತಾನಲ್ಲ ಆ ಮಹರಾಯ ?" "ದಿನದಲ್ಲಿ ಹಲವು ತಾಸು ದುಡಿದಾಗಲಾದರು ನಿನಗೆ ನಿನ್ನ ವಿಲಾಸಗಳಿಗೆ ಸಾಲುವಷ್ಟು ಪ್ರತಿಫಲಗಳನ್ನು ಪರೋಕ್ಷವಾಗಿ ಸದ್ಯದ ವ್ಯವಸ್ಥೆ ನೀಡುತ್ತಿದೆ. ತನ್ನಭಿರುಚಿಯ ಕ್ಷೇತ್ರದಲ್ಲಿ ಮುಂದರಿಯಬೇಕಿದ್ದರೆ ಅವನಿಗೆ ಅಷ್ಟೂ ಇಲ್ಲ. ಭಾಷೆ, ಸಂಸ್ಕೃತಿಗಳ ಬಗ್ಗೆ ಸಮಾಜಕ್ಕೆ ಮಹಾದುರ್ಭಿಕ್ಷವೇ ತಟ್ಟಿದಂತೆ ಗೋಚರವಾಗುತ್ತಿದೆ. ಸರಿಯೂಟ, ವಸನಗಳಿಗೆ ಸಹ ಗತಿಯಿರದೆ ತೊಳಲುತ್ತಿದ್ದಾನೆ. ಸರಕಾರದ ಕಡೆಯಿಂದಾದರು ಸಹಕಾರ ಸೊನ್ನೆ. ಬೇರೆಲ್ಲ ನೀಚ ಕ್ಷೇತ್ರಗಳಿಗೆ ದೇಶಕೋಶದಲ್ಲಿ ಸಂಪತ್ತು ಧಾರಾಳವಾಗಿದೆ. ಕುಬೇರನ ಕೋಶವೇನೇ ಬಂದಿಲ್ಲಿ ಸೇರಿದೆ. ಹಾಗಿರುವಾಗ ಬದುಕಿಗು ಸಹ ಹೋರಾಡುತ್ತಿದ್ದರೆ ಆತನ ಶಕ್ತಿಗಳ ಬಗ್ಗೆ ಕೂಡ ಯಾಕೆ ಗೃಹದೃಷ್ಟಿ ಕಾರುತ್ತಿದ್ದೀಯ ಪುಣ್ಯಾತ್ಮ ? ಆತನ ಬಾಳ್ವೆಯೇ ನಿನ್ನ ಕಣ್ಣಿಗೆ ಭಾರವಾಗ್ತದಾ ? ನಿನ್ನೆ ಇಂದಿನ ಮಹಿಮಾಟು ನೋಡಿಬೇ ತಾನು, ತನ್ನ ಸಮಾಜ ಆತನಿಗೆ ಮಹಾ ಸೌಕರ್ಯ ನೀಡಿರೋ ರೀತಿ ಮಾತಾಡ್ತ ಇರೋದಕ್ಕೂನೂ ತಡೆ ತರ್ತೀಯಲ್ಲ ನವನಾಗರಿಕ

ತೆಯು ಮಹಾಪ್ರಭು ? ಹೊಸ ತೀಳಿವುಗಳು, ನವ ವ್ಯವಸ್ಥೆಯ ಗಿಡಗಳಿಗೆ ಈ ವಿಧದ ಶೀಲವೇ ಹೆಗ್ಗೊಂಬೇನಾ ? ಸದಾ ಒರೀತ್ಲೇ ಕುಳಿತ್ರೆ, ಹಸಿವೇಲಿ ಅರ್ಧಾಯು ಕಳಕೊಂಡ್ರು ಗಮನಿಸೋರಿಲ್ಲ ಗೊತ್ತಾ ? ಒದುಕುಗಳನ್ನೇ ಲೇಖನಿಯಾಗಿಸಿ ಸ್ವಾರ್ಥ ಪೂರಿತ ದುಷ್ಕಾಡಂಬರೀನೇ ಬರಿತಿರೋ ಮಾಯೆಯ ಕೈಗಳಿಗೆ ಪಥಪೂರ್ತಿ ಬಿಡುಪೊದಗಿಸೋದಿಲ್ವಪ್ಪ ನಿನ್ನಂಥೋರು !"*

ಪಥಾವಲೋಕನಾ, ಪಥಾವಲೋಕನಾ ಗತಿಂಸುನು ಬಿಂಬವು ಚಿರನೂತನಾ|| ಸುಜನರ ಮುಡಿಗಿದ ತೊಡಿಸುವೆನು ಶಾರದೆಯುಡಿಗೆ ಸಲಿಸುವೆನು ಗಣಪತಿ ಕೈಗೇ ರಚಿಸೀವೆ ದೊರಿ ಗೆಲು ಹಾಡಿ ನಿವೇದಿಸುವೆ. ||

ವಿನತಿ : ಎನ್ನದೆನ್ನುವದೇನದಿಲ್ಲವು ಎಲ್ಲ ತನುಮನ ನಿನ್ನದೆ। ನಿನ್ನ ವಾಂಛೆಯ ಹೊರತು ನುಡಿಯೆನು ನಡೆಯಲಾರೆನು ದೇವನೇ। ಧರೆಲಿ ಹಲವರು ಹತ್ತು ಬಗೆಯಲಿ ಶಕ್ತಿ ಸಲಿಸಲಿಕೆಳೆವರು। ಮರೆಲಿ ದಿವ್ಯತೆಗೊಪ್ಪಿ ಮೀಟುತ ನೀನೆ ಮುದವಿಸೊ ಬಾಳುವೆ। ಕೆರೆಯ ನೀರನು ಕೆರೆಗೆ ಚೆಲ್ಲುವ ತೆರದೊಳಿರು ವೆನು ಪಥದಲಿ। ಬೆರೆತ ಲಕ್ಷ್ಯದಿ ಕರದಿ ಕಡೆದಿಹೆ ನಿನ್ನಲೇನನು ಕೋರಲಿ। ಬರುವ ಲಾಭವು ನಷ್ಟವೆಲ್ಲವು ನಿನ್ನದೇ ಮುಡಿಪಾಗಲು। ಕೊರಗು ಯಾತಕೆ ಮಿಡುಕದೇತಕೆ ತಣಿವ ಪದ ನಿಲಯೊದಗಲು।*

* ಓ ಮಹಾಪ್ರಭುಗಳೇ, ಇನ್ನಾದರು ಎಚ್ಚರರಾಗಿರಿ *

"ಎಲೈ ಕುಮಾರಾಗ್ರಣಿ, ಜಗತ್ತಿನ ಸ್ಥಾನಸ್ಥಾನದಲ್ಲಿ ಸಹ ಭಗವಂತನ ಸೃಷ್ಟಿ ವ್ಯಾಪಿಸಿಕೊಂಡಿದೆ, ಸೋಗಿನ ತಿಳಿವನ್ನು ಗಳಿಸುವ ಸೋಗಿನಲ್ಲಿ ವಿದ್ಯಾಲಯವೆಂಬ ನಾಮಧೇಯವನ್ನು ಧರಿಸಿರುವ ಅವಿದ್ಯಾನಿಲಯಗಳಿಗೆ ಹೋಗಿ ಬರುತ್ತ ಸಮಯ, ಶಕ್ತಿ, ಸಂಪತ್ತುಗಳನ್ನೆಲ್ಲ ದುರಾಕರ್ಷಣೆಗಳ ಸಂಗದಲ್ಲಿ ದುರ್ವ್ಯಯಪಡಿಸಿ ಮುಂದೆ ಸೋಗಿನ ಸ್ಥಾನಗಳ ಮೂಲಕ ಅಧಿಕ ಲಾಭಗಳನ್ನು ದೊರಕಿಸಿಕೊಳ್ಳಲೆಂದು ಪರೀಕ್ಷೆಗಳಲ್ಲಿ ಸೋಗಿನ ಗೆಲುವಿನಿಂದ ಹೆಚ್ಚಂಕಗಳನ್ನು ಲಭ್ಯವಾಗಿಸಲು ಯಾವುದೇ ರೀತಿಯ ಅಪ್ರಾಮಾಣಿಕ ಮಾರ್ಗವನ್ನು ನೀನು ಹಿಡಿದರು ಸೋಗಿನ ಗುರುಗಳಿದನ್ನು ಪ್ರೋತ್ಸಾಹಿಸಿದಾಗಲು ಪರಮಾತ್ಮನಿಗಿದು ಖಂಡಿತವಾಗಿ ತಿಳಿಯುತ್ತದೆ. ಮುಂದೆ ತಪ್ಪದೆ ಹೆಚ್ಚಿನ ದುಃಖಕ್ಕೆ ನೀನು ಗುರಿಯಾಗಬೇಕಾಗುತ್ತದೆ" ಎಂಬ ಸತ್ಯವನ್ನು ಮಕ್ಕಳ ಮನಗಳಲ್ಲಿ ಬೇರೂರಿ ಸದ ತಂದೆತಾಯಿಗಳು ವಾಸ್ತವಿಕವಾಗಿಯು ಬಂಡೆಬಾಯಿಗಳು. ಇವನ್ನು ಹೊಕ್ಕಿರುವ ಬಾಳುಗಳು ತಮ್ಮ ಮೂಲ ಕಿರಣಗಳು, ಶಾಶ್ವತಸಾಧನೆಗಳ

ಲಕ್ಷ್ಯವನ್ನು ಕಳೆದು ಕೊಂಡು ಸಂಕುಚಿತತೆಯ ಕತ್ತಲಲ್ಲಿ ನಲುಗಬೇಕಾಗುತ್ತದೆ: ಈ ಸತ್ಯವನ್ನು ವಿಶದಗೊಳಿಸದ ಶಿಕ್ಷಕರು ಖಂಡಿತವಾಗಿಯೂ ಕಾಡ್ಮೃಗಗಳ ಗುರುಗಳು. ಈ ಉಗುರುಗಳಿಂದ ಸದ್ಯದ ಸಾಮಾಜಿಕ ವ್ಯವಸ್ಥೆಗಳೆಲ್ಲ ಬಲುಬೇಗ ನುಚ್ಚುನೂರಾಗಿ ಛಿನ್ನಛಿನ್ನವಾಗಿ ಕುಸಿಯುತ್ತದೆ. ಈಗಲಾದರು ಈ ನೀಚ ಪ್ರವೃತ್ತಿಗಳ ಪರಿವರ್ತನೆಯ ಬಗ್ಗೆ ಲಕ್ಷ್ಯ ಕೊಡುವುದರಿಂದ ಕರಮುಗಿದು ವಿನಂತಿಸುವೆ. ಯುವ ಪ್ರಭುಗಳಲ್ಲೊಂದು ಹಾರ್ದಿಕ ವಿಜ್ಞಾಪನೆ. ತಂದೆತಾಯಿಗಳಿಗೆ ನೀವು ಮಕ್ಕಳಿರುವಂತೆಯೇ ಹಿನ್ನೆಲೆಯಲ್ಲಿರುವ ಭಗವಂತನಿಗೆ ಕೂಡ ಕುವರರಾಗಿರುವಿರಿ. ಅಪ್ರಾಮಾಣಿಕ ವರ್ತನೆಗಳಿಂದ ತಮ್ಮಲ್ಲಿರುವ ದಿವ್ಯಾಂಶಗಳನ್ನೇ ಹಿಸುಕುವವರಾಗಬೇಡಿ. ವ್ಯವಸ್ಥೆಗಳನ್ನೇ ಕಳೆದುಕೊಂಡ ಗೊಂದಲಪೂರಿತ ಜೀವನಕ್ಕೆ ಬುನಾದಿ ಕಟ್ಟದವರಾಗದಿರಿ. ನಿಮಗೆ ದಕ್ಷ ರೀತಿಯಲ್ಲಿ ನಿಷ್ಕರ್ಷಿತವಾದ ತಿಳಿವುಗಳನ್ನೊರೆಯುವ ಶಿಕ್ಷಕರು ದೊರಕಿಲ್ಲವೆಂದಾದರೆ ಮಾರ್ಗದರ್ಶಿಕೆಗಳನ್ನಾದರು ಕೊಳ್ಳಿರಿ. ಅವುಗಳ ಸಹಾಯದಿಂದಾದರು ವಿದ್ಯೆಯೆಂದು ಕರೆಸಿಕೊಂಡಿರುವುದನ್ನು ಅಷ್ಟಿಷ್ಟಾದರು ಪಡೆಯಿರಿ. ಮಾಧ್ಯಮಿಕ ಹಂತದಲ್ಲಿದ್ದರೆ ಈ ಪುಸ್ತಕದ ಮುದ್ರಕರು ನಡೆಸುತ್ತಿರುವ ಗದಗಿನ ಶ್ರೀ ಮಾರುತೀ ಪ್ರಕಾಶನಕ್ಕೆ ಇಪ್ಪತ್ತೈದು ರೂಪಾಯಿಗಳನ್ನು ಕಳಿಸಿ ಎಲ್ಲ ವಿಷಯಗಳ ಸಾರಗಳನ್ನು ತಳೆದಿರುವ ಮಾರ್ಗದರ್ಶಿಕೆಯನ್ನು ಪ್ರಾಪ್ತವಾಗಿಸಬಹುದು. ಅಥವಾ ಪ್ರತಿಯೊಂದು ವಿಷಯಕ್ಕೆ ಅದರ ಅರ್ಧಾಂಶದಷ್ಟು ಹಣಕಳಿಸಿ ಹೆಚ್ಚಿನ ರೀತಿ ಮಾಹಿತಿಗಳನ್ನು ದೊರಕಿಸಬಹುದು. ಹಾಗಾದರು ಸರಿಯೇ, ಭಗವಂತನಿಗೆ, ಸಮಾಜಕ್ಕೆ, ವಿದ್ಯಾವ್ಯವಸ್ಥೆಗೆ ವಿದ್ರೋಹಗಳನ್ನು ಮಾತ್ರ ನಡೆಸಬೇಡಿರಿ.

**ಯಾವ ಪಥ ?**

ಯಾವ ಪಥ, ಯಾವುದರ ಪಥ
ಈ ಬಾಳ ಪಥ, ಧೃತಜೀವ ಪಥ
ನರಕುಲದ ಪಥ, ಸಮುದಾಯ ಪಥ
ತನ್ನರಿವ ಪಥ, ಜನಮನದ ಪಥ,
ಪ್ರಚಲಿತ ಪಥ, ಜಸ ಸರಿದ ಪಥ
ಬೊಗುವವಗಿಲ್ಲಿವೆ ಸಮ್ಮಿಲಿತ ||



## ೧. ಭಾಷೆ, ಧರ್ಮಕ್ಕೆ ತಟ್ಟಿದುವೆ ನೂರಾರು ಮಡಿವಂತಿಕೆ

ಕಾಯಾಸ್ಪೃಶ್ಯತೆ ಹೊರಟೇಹೋಯಿತು. ಪರಂಪರಾನ್ವಿತ ಬ್ರಾಹ್ಮಣನೊಬ್ಬ ಸಾಮಾಜಿಕ ಸ್ಥಾನವೊಂದರಲ್ಲಿ ಅಪ್ಪಿತಪ್ಪಿ ಅದನ್ನಾಚರಿಸಿದನೆಂದರೆ ಮೀಸೆ ಕುಣಿಸಿ ಕೆಂಗಣ್ಣಿನಿಂದ ನೋಡುತ್ತ ಆತನ ಕಿವಿ ಹಿಡಿದೆತ್ತಿ ತಿರುಗಿಸಿ ರಕ್ಷಕ ಠಾಣೆಗೆ ಸೆಳೆದೊಯ್ಯುವಷ್ಟು ಮೇಲೇರಿದ್ದಾನೆ ಹಿಂದೆ ಹೊಲೆಯನೆಂದು ತಿರಸ್ಕೃತನಾದವನೇ. ಆದೇನಾದರಿದ್ದರೆ ಗತಕಾಲದ ಸ್ತ್ರೀಯರಂತೆ ಹೊರ ಹೊರಡುವ ಹಕ್ಕೀಗ ಗೃಹಗಳೊಳಗೆ ಮುದುಡಿಕೊಂಡಷ್ಟೆ. ಈವಾಗ ಯಾವಾತ ಯಾರ ಶರೀರವನ್ನು ಬೇಕಾದರು ಮುಟ್ಟಬಹುದು. ದಟ್ಟಣಿಗಳ ಮಧ್ಯೆ ಪರಪುರುಷ, ಪರಸ್ತ್ರೀಯರೆಂಬ ಭೀತಿ, ತಡೆಗಳಾದರು ಬದುಕಿರದಾಗಿವೆ. ಹಾಗೆಂದು ಸಮಾಜವೇನಾದರು ಉದ್ಧಾರವಾಯಿತೆ ? ಹಿಂದೆ ಪಾಪಕಾರಿ, ನರಕ ಶಿಕ್ಷೆಗೆ ದಾರಿ, ದೈವಕ್ರೋಧಕ್ಕೆ ಗುರಿಗಳೆಂದು ಪರಿಗಣಿತವಾಗಿ ಅಸ್ಪೃಶ್ಯವೆನಿಸಿದ್ದ ದುಷ್ಕಾರ್ಯಗಳು, ಭ್ರಷ್ಟಾಚಾರಗಳೇ ಇಂದು ಅನವರತ ಸ್ಪೃಶ್ಯಗಳಾಗಿ ಸಮೂಹಗಳ ನಡುವೆ ಅಗ್ರಪೀಠಗಳನ್ನಡರಿ ರಾರಾಜಿಸುತ್ತಿವೆ; ಪೂಜ್ಯತೆಯ ವೈಭವದೊಡನೆ ಮೆರೆದಾಡುತ್ತಿವೆ. ಜನರು ತಮ್ಮೆಲ್ಲ ವಿಕಾರಗಳನ್ನು ಹಿಗ್ಗಿಸಿ ಅವುಗಳ ಪರಿಚರ್ಯದಲ್ಲಿ ಸರ್ವದಾ ನಿಮಗ್ನರಾಗಿದ್ದಾರೆ. ಈ ಗೊಂದಲದಲ್ಲಿ ಭಾಷೆ, ಧರ್ಮಗಳ ಸೇವೆಗಳು ಸಹಜವಾಗಿ ಅಸ್ಪೃಶ್ಯಗಳೆಂಬ ರೀತಿ ೧೦೦೦ ದಲ್ಲಿ ೯೯೯ ಮಂದಿಗಳಿಂದಲು ತಿರಸ್ಕೃತವಾಗಿ ಸಾಮಾನ್ಯಾನುಕೂಲತೆಗಳನ್ನು ಸಹ ಕಳೆದುಕೊಂಡು ದೂರ ಸರಿದು ಕುಗ್ಗಿ, ಬಗ್ಗಿ, ದೈನ್ಯ, ದುಃಖಗಳಿಗೊಗ್ಗಿ ನಿಂತಿರಬೇಕಾದಂಥ ಪಾಡುಗಳೊದಗಿವೆ. ಅವುಗಳ ಬಗ್ಗೆ ಭ್ರಮಾನ್ವಿತರಾದಂಥ ಆಧುನಿಕರು ವ್ಯಕ್ತಗೊಳಿಸುತ್ತಿರುವಂಥ ಮಡಿವಂತಿಕೆಗಳಾದರು ಸಾಮಾನ್ಯವೆ ? ೧) ಕಛೇರಿಗಳು ಉಪಾಹಾರ ಗೃಹಗಳಾಗಬಹುದು, ಹರಟೆಯ ಬೀಡುಗಳಾಗಬಹುದು ವೈಯುಕ್ತಿಕ ಕಾರ್ಯಗಳನ್ನು ಗೈಯುವ, ಪತ್ರಗಳನ್ನು ಬರೆಯುವ ನೆಲೆಗಳಾಗಬಹುದು, ಬಾನುಲಿಗೀತ ಕ್ರೀಡಾವಾರ್ತೆಗಳ ಶ್ರವಣಾಲಯಗಳಾಗಿ ಬದಲಬಹುದು, ವಿಶ್ರಾಂತಿ ಭವನಗಳೆನಿಸಬಹುದು, ವಿವಿಧ ವಿಲಾಸಗಳ ಧಾಮಗಳಾಗಬಹುದು. ಆದರೆ ಪುಸ್ತಕ

ವ್ಯವಹಾರ ಗೈಯುವವನಿಗಾಗಲೀ, ಧರ್ಮಬೋಧಕನಿಗಾಗಲೀ ಎರಡು ನಿಮಿಷಗಳ ಅಲ್ಪಾವಧಿಗೆ ಸಹ ಹಲವೆಡೆ ಪ್ರವೇಶ ದೊರೆಯದು. ೨) ತಮ್ಮ ಶರೀರ ಅಥವಾ ಮನಸ್ಸಿನ ಆರೋಗ್ಯವನ್ನು ಕೆಡಿಸುವ, ಶಕ್ತಿಗಳನ್ನು ನಿಷ್ಫಲಗೊಳಿಸುವ ವಸ್ತುಗಳಿಗೆ, ವಿಷಯಗಳಿಗೆ ವ್ಯಯಗೈಯುವುದಾದರು ಅತೀವವಾದ ಪ್ರಯೋಜನಕಾರಿಯೆಂದೇ ಮಾನವ ನೆನೆದುಬಿಟ್ಟಿದ್ದಾನೆ. ಆದರೆ ನಿಜವಾದ ಹಿತವೆಡೆಗೆ ಬಾಳ್ವೆಯನ್ನು ಮುಂದರಿಸುವ ಸಾಹಿತ್ಯದೆಡೆಗಿನ ವಿನಿಯೋಗ ಮಾತ್ರ ಪೂರ್ತಿ ನಿಷ್ಪ್ರಯೋಜಕವೆನ್ನುವ ನಿಲುವು ಕಲಿದೆವ್ವದಂತಾತನನ್ನು ಬಡಿದುಬಿಟ್ಟಿದೆ. ತಾನು ಬಹುವಾಗಿ ನಚ್ಚಿ, ಪ್ರೀತಿಸುತ್ತಿರುವ ವಿಷಯಗಳನ್ನಾದರು ವಿಚಾರಗಳೇ ಮಾತೃರೂಪಗಳಿದ್ದು ಹಾಸುಹೊಕ್ಕಾಗಿ ಸೇರಿ ರಚಿಸಿರುವುವೆಂಬುದನ್ನಾತ ಸ್ವಲ್ಪವಾದರು ಗಮನಿಸದಾಗಿದ್ದಾನೆ. ೩) ಶರೀರ ಅಥವಾ ವಿಲಾಸಗಳಿಗೆ ಸಂಬಂಧಿತ ದುಂದುಗಾರಿಕೆಗಳು ಸಹ ನವಶಿಕ್ಷಿತರಿಗೆ ಕಸಗಳು ಅಥವಾ ಬಚ್ಚಲಿನ ರೊಚ್ಚೆಯನ್ನು ನಷ್ಟಪಡಿಸಿಕೊಂಡಂತಿರುತ್ತದೆ. ಧಾರಾಳವಾಗಿ ದೊರೆಯುತ್ತಿರುವ ನೀರಿನ ರೀತಿಯಲ್ಲಿ ತಾವು ಸ್ವಲ್ಪವೂ ದುಡಿಯದೇನೇ ಪಡೆದಿರುವ ಧನ, ತಮ್ಮಪ್ಪನಿಂದಲೋ, ತಾತನಿಂದಲೋ ದೊರಕಿದ ಸಿರಿಯೆಂಬುದನ್ನು ಪ್ರಮಾಣೀಕರಿಸುವಂತೆ ದಶಕ, ಶತಕಗಳ ಗುಣಿತಗಳಲ್ಲಿ ಸಾಪ್ತಾಹಿಕವಾಗಿ ಬೇಕಾದರು ಸಲ್ಲಿಸುತ್ತಿರುತ್ತಾರೆ. ಆದರೆ ಸತ್ಕೃತಿಗಳ ಬಗ್ಗೆ ಅಪರೂಪವಾಗಿ ಗೈಯುವ ನೀಡಿಕೆ ಕೂಡ ತನ್ನ ಗಣನೆ, ಗಾತ್ರ, ಪವಿತ್ರತೆ, ಮಹತ್ತ್ವಗಳನ್ನು ವಿಪರೀತವಾಗಿ ಹೆಚ್ಚಿಸಿಕೊಳ್ಳುತ್ತದೆ. ಅತ್ಯಂತ ಅಲ್ಪ ಪ್ರಮಾಣದಲ್ಲಿ ಲಭಿಸಿದ ಮಹಾದೇವನ, ಶ್ರೀಮನ್ನಾರಾಯಣನ ಪೂಜಾಪ್ರಸಾದ, ಪರಮ ಪಂಚಾಮೃತ ತೀರ್ಥವಿದೆಂದು ಗ್ರಹಿಸಬೇಕಾಗುತ್ತದೆ. ಇದನ್ನು ಸ್ಪಷ್ಟೀಕರಿಸುವಂತೆ ಬಳ್ಳಾರಿ ಮೂಲೆಯಲ್ಲಿ ರಾಷ್ಟ್ರೀಕೃತ ಧನಾಲಯದ ಅಧಿಕಾರಿಯೊಬ್ಬ ಅರ್ಧ ತಾಸು ಕಾಲ ಕೂಡಿಸಿ ಅಷ್ಟು ಹೊತ್ತು ಅಸ್ಫುಟಪ್ರಿಯಾದರು ಶಕ್ತಿಗಳು ಬೇರೆ ಪ್ರಯೋಜನ ಗಳಿಸದಂತೆ ತಡೆಗಟ್ಟಿ ಕಷ್ಟದಿಂದ ರೂಪಾಯೊಂದನ್ನು ತರಿಸಿ ನೀಡಿದ. ವಿವರಗಳನ್ನು ತೀರ್ವೇ ಹೀಗಾತ ಗೈದಿರಬೇಕಾದರೆ. ಪಾಪ, ಆತನಿಗೆಷ್ಟು ಕಡಿಮೆ ವೇತನ ದೊರೆಯುತ್ತಿರಬೇಕು! ಪ್ರಕಾಶನಕ್ಕೆ ಗಣನೀಯವಲ್ಲದಿದ್ದರು ತೃಪ್ತಿಕರವಾದೊಂದು ಸಹಕಾರ ಆತನಿಂದ ಪ್ರಾಪ್ತವಾಗಬೇಕಾದರೆ ಕುಬೇರನ ಕೋಶ

ನನ್ನೀ ಜಗತ್ತಿಗೀಪರೀಕಾದೀತ್ರೇನೋ. ದುರ್ವಿಷಯಗಳ ಕಡೆಗೆ ಸಹ ಅವನಿದೇ
ನಿಲುವಿನವನಾದರೆ ಜಪ್ರಣತೆಯಲ್ಲು ವಿವೇಕವಿದ್ದೀತೆಂದು ಹೊಗಳಿಯೇನು;
ಅಪ್ರತಿಮ ಗುಣಪ್ರೋಂಪನ್ನು ಕಂಡೆನೆಂದು ಬಗೆದೇನು. ಏನಿದ್ದರು ಸರಿಯೇ,
ನಮ್ಮ ಕೇಂದ್ರ ಕ್ಷೇತ್ರಗಳಲ್ಲಿ ಮುಖ್ಯ ಭಾಗಗಳಲ್ಲಿರುವ ಸರಕಾರೀ ಪ್ರಭುಗಳು
ಅವನಷ್ಟು ಕೂಡ ಮಾನವೀಯತೆ ತಳೆಯದಿರುವುದರಿಂದ ನಾನು ಕೃತಜ್ಞತೆ
ಯಿಂದ ಸರಿಯುವಂತಿಲ್ಲ. ೪) ತಮ್ಮ ದೇಹ, ಮನಸ್ಸುಗಳನ್ನು ಕೆಡಿಸು
ವಂಥ ವಸ್ತು, ವಿಷಯಗಳೇ ಆಧುನಿಕರಿಗಿಂದು ಮಹಾಗುರುಗಳೆನ್ನಿಸುತ್ತಿವೆ.
ಪರಮ ಸಂತರನ್ನು, ಯೋಗೀಶ್ವರರನ್ನು ಸಹ ಹೆಚ್ಚಿನವರು ನಿರ್ಲಕ್ಷ್ಯಗಳ
ಮೂಲೆಗೆ ತಳ್ಳಿದ್ದಾರೆ. ಮತ್ತೆ ಪ್ರಾಪಂಚಿಕ ಹಿತಗಳನ್ನು ಮಾತ್ರ ಮೂಡಿ
ಸುವ ಸಾಮಾನ್ಯ ಸಾಹಿತ್ಯಗಳ, ಅವನ್ನು ರೂಪುಗೊಳಿಸುತ್ತಿರುವವರ ಪಾಡೇನು!
ಜೇನುಹುಳಗಳ ಪಟ್ಟಣಿ ನೆನಪಿಸಿ ದುರ್ವಸ್ತು, ದುರ್ವಿಷಯಗಳ ಸ್ಥಾನಕ್ಕೆ
ತಾವೇ ಸಾಗಿ ಶ್ವಾಸೋಚ್ಛ್ವಾಸಕ್ಕೆ ಸಹ ವಾಯುವಿರದಂತೆಸಗಿ ವಿತ್ತಮೊತ್ತ
ಗಳನ್ನು ಅಗಣಿತ ಪ್ರಮಾಣಗಳಲ್ಲಿ ಸುರಿಯುತ್ತಿದ್ದಾರೆ ನವಪ್ರಭುಗಳು.
ಸಾಹಿತ್ಯ, ಧಾರ್ಮಿಕ ಸಂದೇಶಗಳನ್ನು ತಂದವರು ತಾವೆಷ್ಟು ಗುರುತಿಸಿ,
ಗೌರವಿಸದಿರುವ ಸ್ಥಿತಿಗಳಲ್ಲಿ ಮನೆಬಾಗಿಲಿಗೆ ಬಂದಿದ್ದರು ಕೂಡ ಅವರಿಗೆ
ಅಗತ್ಯವಿಲ್ಲವೆನ್ನಿಸುತ್ತಾರೆ. ತಮ್ಮ ನ್ನವರು ಪೀಡಿಸಲು ಆಗಮಿಸಿದರೆಂಬಂತೆ
ಕ್ರೌರ್ಯದೊಡನೆ ತುಚ್ಛೀಕರಿಸುತ್ತಾರೆ. ೫) ವಿಲಾಸಗಳನ್ನೆಲ್ಲ ತಾವೇ ಪೋಷಿ
ಸುವವರಾದರು ಸಹ ಸತ್ಕಾರ್ಯಗಳನ್ನು ಮಾತ್ರ "ಸರಕಾರದ ಬಳಿ ಸಾಗಿ
ಸಹಾಯ ಕೇಳು" ಎಂದು ಹೊರತಳ್ಳುತ್ತಾರೆ. ಇವರ ಮೂಲಕ ವಿಲಾಸ
ಗಳಿಗೆ ಅಧಿಕ ಸಂಪತ್ತನ್ನು ಮುಟ್ಟಿಸುವ ಬದಲು ಸರಕಾರ ತಾನೇ ಅಂಥ
ವುಗಳಿಗೆ ನೇರವಾಗಿ ತಲುಪಿಸತೊಡಗಿ ಇವರ ವೇತನಗಳಲ್ಲಿ ಬಹಳಷ್ಟು ಕಡಿತ
ಗೈದಿತೆಂದರೆ ದೇಶದ ದುಸ್ಥಿತಿಗಳಲ್ಲಲ್ಲನಾದರು ವಿದ್ಯಾವಂತರ ಮಧ್ಯದಲ್ಲಾದರು
ಗಣನೀಯವಾದ ಪರಿವರ್ತನೆಯೊಂದು ಜರಗೀತೆನ್ನಿಸುತ್ತದೆ. ಪ್ರಜಾಪ್ರಭುತ್ವ
ದಲ್ಲಾದರು ಕಿವಿಯಾಚೆಯಿಂದ ಆಹಾರವನ್ನು ತಂದು ಬಾಯಿಗಿರಿಸುವುದು
ಅದೆಂಥ ನಾಟಿಕೆ! ೬) ದುರ್ವಿಷಯ, ದುರ್ವಸ್ತುಗಳ ವ್ಯವಹಾರಿಗಳನ್ನು
ತಾವೇ ಬಳಿಸಾರಿ ಅಧಿಕ ಸಂಖ್ಯೆ, ಪ್ರಮಾಣಗಳಲ್ಲಿ ಪೋಷಿಸುತ್ತಿರುವ

ಕಲಿದೊರೆಗಳು ಸಾಹಿತ್ಯ, ಧರ್ಮಗಳ ವಾಹಿಗಳು ಮಾತ್ರ ಗತಿಕೆಟ್ಟರಂತಾಗಿ ಮಾಯೆಯಮೂರುಗಳಿಂದ ಬಹಿಷ್ಕೃತಗೊಂಡವರಂತೆ ಅನಾಥ. ರೀತಿಗಳೊಡನೆ ರಾಜಕಾರಣಿಗಳ ಬಳಿಗೆ ಸಾಗಲು ಸಲಹೆ ನೀಡುತ್ತಾರೆ. ೭) ದುಷ್ಟಟೆ, ದುರಭ್ಯಾಸಗಳೊಂದಿಗೆ ಸತತವಾಗಿ ಬೆಸೆದವರಿದ್ದರು ಸಾಹಿತ್ಯ, ಧರ್ಮಗಳು ಮಾತ್ರ ಬಾಳ್ವೆಯಿಂದಾದಷ್ಟು ದೂರ ಸರಿದು ಅಭಾವಗಳ ಹೊಸಮೂಲೆಗಳಲ್ಲಿ ಸಾಹಿತಿ, ಧಾರ್ಮಿಕರನ್ನು ಸೇರಿ ಗುಡಿಸಲು ಕಟ್ಟಿಕೊಂಡಿರಬೆಂಬುದು ಮತ್ತೆ ಕೆಲವರ ಅದ್ವಿತೀಯ ಮಾರ್ಗದರ್ಶನ. ಒಟ್ಟಿನಲ್ಲಿ ತಮ್ಮ ಸಹಚರ್ಯವನ್ನಪ್ರ ಪ್ರವೇಶಿಸಬಾರದು. ಉಳುವವನೇ ಹೊಲದೊಡೆಯನಾದ ರೀತಿ ಅಡಿಗೆ ಗೈದವರು ಮಾತ್ರವೇ ಉಣ್ಣುವ ಹಕ್ಕನ್ನು ಪಡೆದವರಾಗುತ್ತಾರೆಂಬ ಕಾಯಿದೆ ಯನ್ನು ಸರಕಾರ ಜಾರಿಗೊಳಿಸಿದಾಗಷ್ಟೇ ಇವರ ಬುದ್ಧಿ ಬದಲಾಯಿಸಿತೇನೋ! ೮) ದುರ್ವಿಚಾರ, ದುರ್ಭಾವಗಳಿಗೆಲ್ಲ ಮನಗಳಲ್ಲಿ ವಿಸ್ತೃತವಾದ ಬೀಡು ಗಳೊದಗಿಸಿದರು ಸುವಿಚಾರ, ಸದ್ಭಾವಗಳು ಮಾತ್ರ ವಿದ್ಯಾರ್ಥಿಗಳ ಬಳಿಗೇ ಸಾಗಬೇಕು. ದುರ್ವಿಷಯಗಳೆಲ್ಲ ಮನಸ್ಸಿಗೆ ಬೇಕಾದರು ಸಹ ಸದ್ವಿಚಾರ ಗಳ ಮುಟ್ಟಿಗೆ ತಿಳಿವೆಲ್ಲವನ್ನೂ ಪಡೆದಿರುವ ಸರ್ವಜ್ಞರಿವರು. ವಿದ್ಯಾರ್ಥಿಗಳು ತರುಣರಾದರು ಇವನ್ನಾದರಿಸಿದರೆ ಅಪ್ಪಂದಿರಿಗೆ, ಯೋಗ್ಯರಾದ, ಜನರ ದಾರಿ ಹಿಡಿದ ಮಕ್ಕಳೆನ್ನಿಸಿಯಾರೆ? ನಿರ್ದಾಕ್ಷಿಣ್ಯವಾಗಿ "ಹೇಯ್ ನಮ್ಮ ಮನಸ್ಸಿನ ಸಂಭ್ರಮೋತ್ಸಾಹಗಳಿಗೆ ನೀವೊಪ್ಪೀರ? ವೃದ್ಧರ ಬಳಿಗೆ ಹೋಗಿ" ಎಂದು ತಿರುಮಂತ್ರ ಸಲ್ಲಿಸುತ್ತಾರೆ. ಪಾಪ, ಸಾಹಿತ್ಯ, ಧರ್ಮ ಗಳಿಗೆ ಊರು, ನೆಲೆಗಳನ್ನು ಕಳೆದುಕೊಂಡು ಆಶ್ರಯದಾತರ ಹುಡುಕಾಟ ದಲ್ಲೇ ಸುತ್ತಾಡುತ್ತಿರಬೇಕಾದ ದುಸ್ಥಿತಿ. ೯) ನೀಚ ಪ್ರವೃತ್ತಿಗಳಿಗೆಲ್ಲ ತಮ್ಮ ಮತಿ, ಹೃದಯಗಳಲ್ಲಿ ಬಹಳಷ್ಟು ಭವ್ಯವಾದ ಸ್ಥಾನಗಳನ್ನು ನೀಡುತ್ತಾರೆ. ಆದರೆ ಸತ್ಸಂದೇಶಗಳಿಗೆ ಮಾತ್ರ "ವಾಚನಾಲಯಗಳಿಗೆ ಹೋಗು" ಎಂದು ಹಲವರು ಸೂಚಿಸುವ ದಾರಿ. ಪಾಪ, ಅಲ್ಲಾದರು ಅವುಗಳಿಗೆ ಅವಕಾಶ ಸಿಗುತ್ತದೆಯೇ? ಅಲ್ಲಿ ದುತ್ಸಂದೇಶಗಳಿಗೆ ಮಾತ್ರವೇ ಪರಿಪೂರ್ಣಾಸ್ಪದ. ಸತ್ಸಂದೇಶಗಳನ್ನರಿಸಿದರೆ ನವಪ್ರಭುಗಳೋದಿಯಾರೆ? ಹಾಗಿರಲಿ ಪ್ರಭು ಬುದ್ಧಿಗಳಲ್ಲಿ ಪರಿವರ್ತನೆಯನ್ನೇನಾದರು ಮೂಡಿಸಿದರೆ ನೂತನ ನಾಗರಿಕತೆ ಯಲ್ಲಿ ಪ್ರಭುಗಳಿಂದಲೇ ನೈದಳೆದ ಸರಕಾರದ ಮಹಾಘನತೆಗೆ ಹೆಚ್ಚಿನ ಕುಂದೊದ

ಗಿತ್ತಿಲ್ಲವೆ? ೧೦) ಧೂಮಪಾನ, ಮದ್ಯಗಳಂತಹ ವಸ್ತುಗಳಾದರು ಪ್ರಭುಗಳಿಗೆ ಸುತ್ತೆಡೆ ಸನಿಹದಲ್ಲೇ ಲಭ್ಯವಾಗುತ್ತಿರಬೇಕು. ಸಾಮಗ್ರಿಗಳ ನೀಚತೆ ಹೆಚ್ಚಿದಷ್ಟು ಗ್ರಾಹಕರು ಅಧಿಕವಾಗುತ್ತಾರೆ. ಆದರೆ ಸತ್ಸೇವೆಗಳಿಗೆ ಮಾತ್ರ ಇವನೂ ಇಲ್ಲ, ಅವನೂ ಇಲ್ಲ ಸ್ಮಶಾನವನ್ನೇ ಹೊಕ್ಕಂತಾಯಿತು ಎನ್ನುವ ಪಾಡಾಗುತ್ತದೆ. ಇವನು ಅವನ ಕಡೆಗೆ ಬೊಟ್ಟು ತೋರುತ್ತಾನೆ, ಅತ ಇವನನ್ನೇ ಸೂಚಿಸುತ್ತಾನೆ ಅಥವಾ ಮತ್ತೊಬ್ಬನ ಬಳಿಗೆ ಕಳಿಸುತ್ತಾನೆ. ಹಲವರ ಬಳಿಗೆ ಸಾಗಿ ಯಾಚಕ ಕೊನೆಗೆ ಬೇಕಷ್ಟು ಬಾರಿ ಗಗನದರ್ಶನವನ್ನೇ ಪಡೆಯಬೇಕಾಗುತ್ತದೆ. ೧೧) ಸಕಲ ಸಹಕಾರಗಳೊಡನೆ ದುರ್ವಸ್ತು, ದುರ್ವಿಷಯಗಳಿಗೆ ತಮ್ಮ ಶರೀರ, ಮನಸ್ಸುಗಳಲ್ಲಿ ಪೂರ್ಣ ಪ್ರಭುತ್ವವನ್ನೇ ಕೊಟ್ಟು ಅವುಗಳಿಂದ ಲಭ್ಯವಾಗುವ ನಶ್ವರ ಸುಖಗಳಲ್ಲಿ ಮೆರೆದಾಡುತ್ತಾರೆ ನವಪ್ರಭುಗಳು. ಆದರೆ ಸತ್ಸೇವೆಗಳನ್ನು ಮಾತ್ರ “ಇಲ್ಲಿ ಹೋಗು”, ”ಅಲ್ಲಿ ಹೋಗು” ಎಂದು ದೂರಕ್ಕಟ್ಟಿ ಬಳಲಿಸುತ್ತಿರುವುದರಲ್ಲೇ ಅವರಿಗೆ ವಿಶೇಷ ಸಂತೃಪ್ತಿ. ೧೨) ಆಹಾರಗಳಲ್ಲಿ ವಿಷಪದಾರ್ಥಗಳ ಬೆರಕೆಗೈದು ಸಮಾಜದಲ್ಲಿ ಬೇಕಷ್ಟು ಮಂದಿಗಳ ಆಯುಸ್ಸನ್ನೇ ತಗ್ಗಿಸುವ ವ್ಯಾಪಾರಿಗಳಿದ್ದಾರೆ. ಆದರೆ ಅವರಲ್ಲಿ ಹಲವರಿಗೆ ಪುಸ್ತಕಗಳನ್ನು ಕೊಳ್ಳುವುದಿರಲಿ ಅವುಗಳ ಬಗ್ಗೆ ಸಹಕರಿಸುವುದೆಂದರು ಘನಾಪರಾಧದಂತಹ ಕಾರ್ಯ “ನಾವವನ್ನು ಮುಟ್ಟುವವರಲ್ಲ” ಎನ್ನುವುದರಲ್ಲೇ ಕೆಲವರಿಗೆ ಹೆಮ್ಮೆ. ೧೩) ಎಷ್ಟೋ ಸಂದರ್ಭಗಳಲ್ಲಿ ಕೃತಘ್ನತೆಯ ಮಹಾರೋಗವನ್ನು ಪರಿಹರಿಸಲು ಸಾಹಿತ್ಯಗಳು ಔಷಧಿಗಳನ್ನೀಯುತ್ತವೆ ಎನ್ನುವ ಸತ್ಯವನ್ನು ಹೆಚ್ಚಿನ ವೈದ್ಯರು ತಿಳಿದಿರುವುದಿಲ್ಲ. “ನಾವು ವೈದ್ಯ ನನಗೇಕೆ ಪುಸ್ತಕ? ”ಎನ್ನುವುದವರ ಅಹಂಕಾರಮಯ ಪರಿತ್ತೆ. ೧೪) ಸಮಾಜದ ಬೇರೆಲ್ಲ ಕ್ಷೇತ್ರಗಳೊಂದಿಗೆ, ವಿಲಾಸಗಳೊಂದಿಗೆ ಬ್ರಾಹ್ಮಣರು, ಪುರೋಹಿತರಾದವರು ಸಂಬಂಧಗಳನ್ನಿರಿಸಿಕೊಂಡಿರಬಹುದು. ಆದರೆ “ಪುಸ್ತಕಗಳಿಂದ ನಮಗೆ ಪ್ರಯೋಜನವಿಲ್ಲ” ಎನ್ನುವುದು ಅಂಧಾನಿಂದಲು ಹೊರಡುವ ಪ್ರತಿಕ್ರಿಯೆಗಳು. ೧೫) “ನಾವು ಇಲ್ಲಿ, ಪಡೆ ವಿಕ್ರಯಿಸುವವರು. ನಮಗೆ ಪುಸ್ತಕ ಬೇಕೆ?” ಎನ್ನುವುದು ಆಹಾರ ಗೃಹಗಳವರ ನಾದ. ಬೇರೆಷ್ಟೋ ದುರ್ವಿಷಯಗಳ ಕಡೆಗೆ ಅವರಲ್ಲಿಂಥ

ವನಿಗಳು ತಪ್ಪಿ ಸಹ ರೋಮವನ್ನಾದರಿತ್ತುವುದಿಲ್ಲ. ೧೬) ಶಿಕ್ಷಕರಾಗಿಯು ಮದ್ಯಪಾನಿಗಳು, ಷಡ್ರಿಪುಗಳಿಗೆ ದಾಸರಾಗಿರುವವರು, ಸಕಲ ಸದ್ಗುಣಗಳನ್ನು ನುಚ್ಚುನೂರೆಸಗಿ ಬಿಸುಡಿರುವವರು ಬೇಕಷ್ಟು ಸಂಖ್ಯೆಯಲ್ಲಿದ್ದಾರೆ. ಆದರೆ ಸುವಿಚಾರಗಳನ್ನು ಸ್ವೀಕರಿಸುವುದಿರಲಿ, ಅವುಗಳ ಸಹಚರ್ಯವನ್ನು ಕೂಡ ಹಲವರು ಮಹಾಪಮಾನವೆಂದೇ ಬಗೆಯುತ್ತಾರೆ. ೧೭) ಪತಿಗೆ ಗೊತ್ತಾಗದಂತೆ ಎಷ್ಟೋ ವ್ಯವಹಾರಗಳನ್ನು, ಮಹತ್ತರ ವಿದ್ರೋಹಗಳನ್ನು ಸಹ ಗೈಯುವ ಪತ್ನಿಯರಿರಬಹುದು. ಆದರೆ ಪುಸ್ತಕಗಳ ಸಂಬಂಧದಲ್ಲಿ ಮಾತ್ರ ಅವರಲ್ಲಿ ಪತಿವ್ರತಾ ಶಿರೋಮಣಿಗಳ ಶೀಲವೇ ವಿಜೃಂಭಿಸುತ್ತದೆ. ಆತನನುಮತಿಯಿರದೆ ಅವರಿಗೆ ಮುಂದರಿಯುವ ಸಾಮರ್ಥ್ಯ ಚಿರುಟಿಹೋಗಿರುತ್ತದೆ. ೧೮) ತಂದೆಗೆ ಸುಳಿವೊದಗದಂತೆ ಲೆಕ್ಕಗಳನ್ನೇ ಅಡಿಮೇಲಾಗಿಸುವ ಮಗನಾದರು ಪುಸ್ತಕಗಳ ವಿಷಯದಲ್ಲಿ ತ್ರೇತಾಯುಗದ ಪಿತೃನಿಷ್ಠೆಯನ್ನೇ ವಿದಿತಗೊಳಿಸುತ್ತಾನೆ. ೧೯) ಅಣ್ಣನಿಪ್ಪ ಮೀರಿ ಬೇಕಷ್ಟು ವಿತ್ತವನ್ನು ದಿನವಹಿ ಹಾರಿಸುವ ತಮ್ಮ ಕೂಡ ಸತ್ಕಾರ್ಯಗಳ ಮಟ್ಟಿಗೆ ತಪ್ಪದೆ ಭರತಶೀಲದ ಮಾದರಿಯೇ ವ್ಯಕ್ತವಾದಂತಾಗುತ್ತಾನೆ. ೨೦) ಬೇರೆಲ್ಲ ವಿಷಯಗಳಲ್ಲಿ ಕಿರಿಯ ಗೃಹ ಸದಸ್ಯರ ಸುಖದುಃಖಗಳ ಕಡೆಗೆ ತಿಲದಷ್ಟಾದರು ಲಕ್ಷ್ಯವಿಂನದೆ ಮನಸೇಷ್ಟ ಸೂಚಿಸಿದಂತೆ ದುಂದುಗಾರಿಕೆ ಗೈಯುವ ಹಿರಿಯರು ಸಹ ಪುಸ್ತಕ ವಿಷಯದಲ್ಲಿ ಅವರನುಮತ ನಿರೀಕ್ಷಿಸುವುದಿದೆ ಅಥವಾ ಕಪಟಾಸ್ವಿತವಾಗಿ ವ್ಯವಹಾರದ ಪೂರ್ಣಾಧಿಕಾರವನ್ನು ಅವರಿಗೇನೇ ಸಲ್ಲಿಸುವುದಿದೆ. ಗಗನಮಣಿ ಪಶ್ಚಿಮದಲ್ಲಿ ಉದಯಿಸಿದಂತಾಗುತ್ತದೆ. ೨೧) ಸರಕಾರೀ ಕ್ಷೇತ್ರಗಳ ಉದ್ಯೋಗಿಗಳು ಬೇರೆಲ್ಲ ವಿಷಯಗಳಲ್ಲಿ ಸ್ವಚ್ಛಂದವಾಗಿ ವ್ಯವಹರಿಸುವವರಾದರು ಸಹ ಪುಸ್ತಕಗಳ ಮಟ್ಟಿಗೆ ಮಾತ್ರ ವ್ಯವಸ್ಥಾಪಕನ ಕಡೆಗೇ ಬೊಟ್ಟು ತೋರುತ್ತಾರೆ. ಈ ಬಗ್ಗೆ ಸಹಕರಿಸಲು ಆತನಾಜ್ಞೆ ಅವರಿಗೆ ಅತ್ಯನಿವಾರ್ಯವಾಗುತ್ತದೆ. ಸಾಹಿತ್ಯವೆಂದೊಡನೆ ಮಿತಿರಹಿತವಾದ ವಿಧೇಯತೆ ಅವರಲ್ಲಿ ತನ್ನಿಂದ ತಾನಾಗಿ ರೂಪುಗೊಳ್ಳುತ್ತದೆ. ೨೨) ಕೈಕೊಡುಗೆ ಪಡೆಯುವುದು, ಹುಸಿದಾಖಲೆ ಸೃಷ್ಟಿಸುವುದು ಮೊದಲಾದವುಗಳಲ್ಲಿ ಪಾರಂಗತರಿರುವ ವ್ಯವಸ್ಥಾಪಕರಾದರು ಹಲವೆಡೆ ಪುಸ್ತಕಗಳ ಬಗ್ಗೆ ಸಹಕರಿಸುವುದರಿಂದ ತಮ್ಮ ಗೌರವಕ್ಕೆ ಲೋಪವೆಂದೇ ನಿರ್ಧರಿಸುತ್ತಾರೆ. ಆ ಕುರಿತು

ನೌಕರರೊಂದಿಗೆ ಸಂಪರ್ಕಿಸಲು ಆದೇಶಿಸುತ್ತಾರೆ. ೨೩) ಬೇರೆಷ್ಟೋ ಕಾರ್ಯ
ಗಳಿಗೆ ಯಾವುದೋ ಸಂತೆಯಲ್ಲಿರುವ ಯಜಮಾನನನ್ನು ಸಹ ಜನ ಕಳಿಸಿ,
ಹುಡುಕಿಸಿ, ಬೇಗನೆ ಬರಿಸಿಕೊಳ್ಳುವವರಿರಬಹುದು. ಆದರೆ ಪುಸ್ತಕವೆಂದೊಡನೆ
ಮನೆಯೊಳಗೆ ವಿರಾಮಾಸನದಲ್ಲಿ ಮಂಡಿತನಿರುವ ಯಜಮಾನ ಕೂಡ ಇಲ್ಲ
ವಾಗುತ್ತಾನೆ. ಪಾಪ, ನಿಮಿಷವೆರಡರಲ್ಲಿ ಹೀಗಾಗಬಾರದೆಂದು ಯಜಮಾನ
ನಿರುವುದನ್ನು ಖಚಿತಪಡಿಸಿಕೊಂಡು ಕಾರಣ ತಿಳಿಸದೆ ಆತನೊಂದಿಗೆ ಭೇಟಿ
ಯನ್ನು ನಿರಾಕರಿಸುತ್ತಿರುವುದು. ೨೪) ಬೇರೇನೋ ಕೆಲಸವೆಂದು ನಗು
ಮೊಗದೊಡನೆ ಆಗಮಿಸುವ ಯಜಮಾನನಿಗೆ ಪುಸ್ತಕವೆಂದೊಡನೆ ಭೂತದರ್ಶ
ನವೇ ತಗಲಿದಂತಾಗುತ್ತದೆ. ಸಿಡುಕು, ತಿರಸ್ಕಾರ ಕ್ಷಣಾವಧಿಯಲ್ಲಿ ಸಿಡಿ
ದೊಡೆಯುತ್ತದೆ. ೨೫) ಅನ್ಯರಾದರೆ ಆದರಿಸಿ ಒಳಕರೆದು ಕೂಡಿಸಿ ಮಾತ
ನಾಡಿಸುವಾತ ಸಾಹಿತ್ಯವಾದಿಯನ್ನು ಸಾಧ್ಯವಾದಷ್ಟು ಶೀಘ್ರ ದೂರಕ್ಕಟ್ಟಲು
ಉತ್ಸುಕನಾಗುತ್ತಾನೆ. ೨೬) ಬೆಡಗು, ನಶ್ವರಸುಖಗಳ ನೊರೆಗಳಿಗೆ ಬೆಲೆ
ಯೇರಿದ ಪ್ರಮಾದೀನ ಕಾಲದಲ್ಲಿ ವಿಚಾರರತ್ನಗಳು ಮೌಲ್ಯವನ್ನು ಕಳೆದು
ಕೊಳ್ಳುತ್ತವೆ. ೨೭) ಬೇರೆಲ್ಲ ವಸ್ತು, ವಿಷಯಗಳ ಬಗ್ಗೆ ರಕ್ತಿ ತುಂಬಿರುವ
ಗೃಹಸ್ಥರಾದರು ಪುಸ್ತಕವೆಂದೊಡನೆ ಬೇಡವೆನ್ನುವ ವಿರಕ್ತಿಯನ್ನು ಶೀಘ್ರ
ಪ್ರದರ್ಶಿಸುತ್ತಾರೆ. ೨೮) ಯಜಮಾನ ಇರುವನೆಂದಾದ ಮೇಲು ಆತ
ಕಾಣಸಿಗುವ ಮುನ್ನ ಸಾಹಿತ್ಯದ ಸುಳಿವನ್ನೇನಾದರು ನೀಡಿದರೆ ಸ್ನಾನ,
ಭೋಜನ, ನಿದ್ರಾದಿ ಕ್ರಿಯೆಗಳು ತ್ವರಿತವಾಗಿ ಅವನನ್ನು ಸುತ್ತುವರಿದು ಸುಲ
ಭಟಿಸಿದ ಸಾಧ್ಯವಿಲ್ಲವಾಗುತ್ತದೆ. ಬೇರೆ ವಿಷಯಗಳಿಗಾಗಿ ಬೇಕಷ್ಟು ದೂರ
ಸರಿಯಬಲ್ಲರಾದರು ಪತ್ರಾದೇಶಗಳ ಬಗ್ಗೆ ಕೆಲವಡಿ ಹೊರಬರುವುದು ಸಹ
ಅವರಿಗೆ ದುಸ್ತರ ಕಾರ್ಯ. ಬುದ್ಧಿ, ವಿವೇಕಗಳೇ ಅಸ್ಪೃಶ್ಯವಿರುವ ಸಂದರ್ಭ
ಗಳಲ್ಲಿ ವಿಚಾರಧಾರೆಗಳೆಂದರೆ ಅವರಿಗೆ ಕಣ್ಣು ಕಸಗಳು. ೨೯) ಅಂಗಡಿಯೇ
ಮೊದಲಾದ ವ್ಯವಹಾರಕ್ಷೇತ್ರಗಳಲ್ಲಿ ಸಾಹಿತ್ಯವೆಂದ ತಕ್ಷಣ ಯಜಮಾನನೇ
ಬದಲಾಯಿಸಿಹೋಗುತ್ತಾನೆ. ಬೇರೆ ವಿಷಯಗಳಿಗೆ ಇರುವವನೇ ದಣಿಯೆನಿ
ಸುವ ಸುಘಟನೆಗೆ ಇಂಥ ದುರ್ಘಟನೆಯನ್ನು ಹೋಲಿಸಬಹುದು. ೩೦)
ಬೇರೆಲ್ಲ ವಸ್ತು, ವಿಷಯಗಳಿಗೆ ರಾಷ್ಟ್ರದಲ್ಲಿ ಸಾರ್ವತ್ರಿಕವಾಗಿ ಸಂಪತ್ತು,

ಸುಭಿಕ್ಷಗಳು ಹರಡಿಕೊಂಡಂತಿರುತ್ತವೆ. ಆದರೆ ಸತ್ಕಾರ್ಯ, ಸತ್ಸೇವೆಗಳ ದಿಕ್ಕಿನಲ್ಲಿ ನಿರಂತರವಾಗಿ ದುರ್ಭಿಕ್ಷವೇ ತಟ್ಟಿದಂತಿರುತ್ತದೆ. ೩೧) ಬೇರೆ ಕ್ಷೇತ್ರಗಳಲ್ಲಿ ವ್ಯಯಗೈಯಲು ಸಾಮಾನ್ಯವಾಗಿ ಪ್ರತಿಯೊಬ್ಬನಲ್ಲು ಧಾರಾಳವಾಗಿ ಸಿರಿಯಿರುತ್ತದೆ. ಆದರೆ ಪ್ರಕಾಶನಕ್ಕೆ ಸಹಕರಿಸಲು ನೂರರಲ್ಲಿ ತೊಂಬತ್ತೊಂಬತ್ತು ಮಂದಿಗಳು ಸಹ ಅಸಮರ್ಥರಾಗುತ್ತಾರೆ. ೩೨) ಬೇರೆ ವ್ಯವಹಾರಗಳ ಮಟ್ಟಿಗೆ ಅದೆಂಥ ದುರ್ವ್ಯವಹಾರವಾಗಿದ್ದರು ಸಹ ಅಕಾರದಿಂದ ಜ್ಞ ವರೆಗೆ ಎಲ್ಲವೂ ಇರುತ್ತವೆ. ಆದರೆ ಪುಸ್ತಕಗಳ, ಸತ್ಸಂದೇಶಗಳ ಬಗ್ಗೆ ಮಾತ್ರ "ಏನೂ ಇಲ್ಲ, ಯಾವುದೂ ಇಲ್ಲ" ಎಂದು ಘಂಟಾಘೋಷವಾಗಿ ಸಾರುವ ತತ್ತ್ವದಿಗ್ಗಜಗಳಾಗುತ್ತಾರೆ ಸಾಮಾನ್ಯ ಲೌಕಿಕರು ಕೂಡ. ೩೩) ದುಷ್ಟ, ನೀಚ ಹವ್ಯಾಸಗಳನ್ನು ಜೀವನದುದ್ದಕ್ಕೆ ಬೇಕಾದರು ಮಗ್ಗುಲಲ್ಲೇ ಮಂಡಿತಗೊಳಿಸಿ, ಪದೇಪದೇ ತಬ್ಬಿಕೊಳ್ಳುವವರು, ಸನ್ಮಾನಿಸುವವರಿರುತ್ತಾರೆ. ಆದರೆ ಬಡಪಾಯಿ ಸಾಹಿತ್ಯವಾಹಿ ಮಾತ್ರ ತಿಂಗಳುಗಳಲ್ಲ ವರ್ಷ ಕಳೆದೇ ಭಿನ್ನ ರಚನೆಗಳೊಂದಿಗೆ ಬಂದರು ಕೂಡ "ಹಗಲೆಲ್ಲ ಬರುತ್ತಿ" ಎಂಬ ಕಟುನಾದ ದೂಷಣೆಗೆ ಹಲವರಿಂದ ಗುರಿಯಾಗುತ್ತಾನೆ. ೩೪) ಬೇರೆ ವಿಷಯಗಳ ಬಗ್ಗೆ ಅದೆಂಥ ಅವಸರದಲ್ಲಿ ಸಹ ತಮ್ಮ ಕಾರ್ಯಮಗ್ನತೆಯನ್ನು ಬದಿಗಿರಿಸಿ ತಾಸುಗಟ್ಟಲೆ ಬೇಕಾದರು ಮಾತನಾಡುತ್ತಿರಲು ಎಲ್ಲರಿಗು ಸಾಧಾರಣವಾಗಿ ಧಾರಾಳವಾದ ಪುರುಸೊತ್ತಿರುತ್ತದೆ. ಆದರೆ ಪುಸ್ತಕವೆಂದರೆ ಸಾಕು ಪ್ರಯಾಣಪತ್ರ ಕೊಂಡಾಗಿದ್ದು ಎರಡೇ ನಿಮಿಷಗಳಲ್ಲಿ ಹೊರಡಲಿರುವ ವಿಮಾನವಲ್ಲಿ ಹೋಗಬೇಕಾಗಿರುವಂಥ ತರಾತುರಿಯನ್ನು ಹೆಚ್ಚಿನವರು ವಿದಿತಗೊಳಿಸುತ್ತಾರೆ.

೩೫) ಹಾಳು ಹರಟೆಗಳಲ್ಲಿ, ನೀಚ ಸಂಗ ಹಾಗು ವಿಲಾಸಕ್ರೀಡೆಗಳೊಡನೆ ದಿನದ ಹತ್ತು ತಾಸು ಬೇಕಾದರು ಹಿಂದುಮುಳಿಸಬಲ್ಲ ವಿಕ್ರಮಿಗಳಾದವರು ಸಾಹಿತ್ಯವೆಂದೊಡನೆ "ಪತ್ರಿಕೆಯೋದಲು ಸಹ ನನಗೆ ಪುರಸೊತ್ತು ಸಿಗುವುದಿಲ್ಲ" ಎನ್ನುವ ದೈನ್ಯವನ್ನು ಪ್ರಕಟಿಸುತ್ತಾರೆ. ಜಗತ್ತಿನಲ್ಲಿ ವಿಷಯಗಳನ್ನು ತಿಳಿದುಕೊಳ್ಳಬೇಕೆಂದರೆ,ಯಾರಾರದೋ ಹಾಡುಗಳನ್ನುಕೇಳಬೇಕೆಂದರೆ, ಯಾವಾವುದೋ ದೃಶ್ಯಗಳನ್ನು ನೋಡಬೇಕೆಂದರೆ, ಏನೇನೋ ಕ್ರೀಡೆಗಳ ಕುರಿತು ಸುದ್ದಿಗಳನ್ನು ಪಡೆಯುತ್ತಿರಬೇಕೆಂದರೆ ದಿನದಿಪ್ಪತ್ತನಾಲ್ಕು ತಾಸುಗಳು, ತಾಪಿನನುನತ್ತು

ನಿಮಿಷಗಳು, ನಿಮಿಷವೆರುವತ್ತು ಕ್ಷಣಗಳು ಹೇಗೆ ಲೆಕ್ಕಕ್ಕೆ ಬಂದಾವು ? ಅಷ್ಟೆ
ಗಳ ವ್ಯಾಮೋಹದ ಸಲುವಾಗಿ ಮನೆಯೊಳಗಿನ ನಿರಂತರ ಹಿತೈಷಿಗಳಂತಿರುವ
ಸಾಹಿತ್ಯವನ್ನೇ ನಿರ್ಲಕ್ಷ್ಯದಿಂದ ದೂರೀಕರಿಸುವದು ಸರಿಯಲ್ಲವೆಂಬ ತಿಳಿವನ್ನು
ಆಧುನಿಕರ ಮತಿಯೊಳಕ್ಕೆ ಬಡಿದೀಸಬಲ್ಲ ಮಹಾನುಭಾವ ಯಾವನಿದ್ದಾನೆ ?
೩೬) ಹೀನ ವಸ್ತು, ವಿಷಯಗಳು ತಮ್ಮ ಶರೀರ, ಮನಸ್ಸುಗಳಿಗೆ ನಾನಾ ರೀತಿ
ಗಳಲ್ಲಿ ವಿಪತ್ಕಾರಿಗಳಾಗಿದ್ದು ಅವುಗಳ ಸೇವನೆ, ಸಂಗಗಳಿಂದ ಅದೆಂಥ ಪ್ರಯೋ
ಜನವೆಂದು ನವಸಮಾಜಕ್ಕೆ ಗುರುಗಳಾದ ಶಿಕ್ಷಿತರೇ ಅಪ್ಪಿ ತಪ್ಪಿ ಸಹ ಪ್ರಶ್ನಿಸಿ
ಕೊಳ್ಳುವುದಿಲ್ಲ. ಆದರೆ ಸಾಹಿತ್ಯಗಳ ಹುಟ್ಟಿಗೆ ಮಾತ್ರ ಅವರಲ್ಲಿ ಹೆಚ್ಚಿನವರ
ಸಹಕಾರ ದೊರೆಯಬೇಕಾದರೆ ವಾಹಕ ಅವುಗಳ ಸಾಫಲ್ಯವನ್ನು ಗಟ್ಟಿಗೊಳಿಸಿ
ಮೂಟೆಯಲ್ಲಿ ಹೊತ್ತುಕೊಂಡು ಬಂದು ಬಾಗಿದ ಬೆನ್ನಿನೊಡನೆ ಅವರ ಮುಂದಿಳಿ
ಸಬೇಕಾಗುತ್ತದೆ. ಅಂಥ ವೇಳೆಯಲ್ಲಿ ಸಹ "ನಿನ್ನ ಸ್ಥಿತಿ ಹೀಗಾಗುವುದಲ್ಲ" ಎಂದು
ಮತ್ತೊಂದು ನೆನವಪೆತ್ತಿ ತುಚ್ಛೀಕರಿಸಿಯಾರು. ೩೭) ಯಾವುದೇ ಸ್ಥಾನದಲ್ಲಿ
ಎಷ್ಟೊಂದು ಕಾರ್ಯಗಳ ಗಡಿಬಿಡಿಯಲ್ಲಿ ಮುಳುಗಿದ್ದರು ಸಹ ತಮ್ಮ ತಂದೆ,
ತಾಯಿಗಳ ಸಂಬಂಧಿ ಕಾಣಿಸಿದನೆಂದರೆ ಕೆಲಸಗಳನ್ನೆಲ್ಲ ಬದಿಗುಳಿಸಿ ನಲವಿನಿಂದ
ಕರೆದು ಮಾತನ್ನಾಡಿಸಿ ಅತ್ಯಾದರದೊಡನೆ ಕೂಡಿಸಿ ಬೇಕಷ್ಟು ಕಾಲವನ್ನಾತನ
ಸಂತೃಪ್ತಿಯ ಸಲುವಾಗಿ ವಿನಿಯೋಗಿಸುತ್ತಾರೆ. ಆದರೆ ಮಾನಸಿಕವಾಗಿ ತಮ್ಮ
ನ್ನು ಜಗತ್ತಿಗೆಲ್ಲ ಪ್ರಾಣಿಸಂಕುಲದಲ್ಲಿ ಶ್ರೇಷ್ಠರಾಗಿ ರೂಪಿಸಿರುವ ಭಾಷೆ, ಧರ್ಮ
ಗಳ ಸಂಬಂಧಿ ತೋರಿದನೆಂದರೆ ದುಷ್ಟ, ಭ್ರಷ್ಟ ಹಾಗು ಕೃತಜ್ಞತಾರಹಿತರಾದ
ರಾಕ್ಷಸರಂತೆ ವರ್ತಿಸುತ್ತಾರೆ. ನಾಗರಿಕತೆ, ಸಂಸ್ಕೃತಿಗಳ ಮೂಲಗಳಾದ ವಿಚಾರ
ಗಳನ್ನೇ ಗುರುತಿಸಲಾರದ, ಪೋಷಿಸಲಾರದವರಿಗೆ ಯಾಕವುಗಳಿಂದ ಹೆಚ್ಚಿನ
ಸುಖ, ಸೌಭಾಗ್ಯಗಳು ದೊರಕುತ್ತಿರಬೇಕೋ ತಿಳಿಯದಾಗಿದೆ. ೩೮) ಬೇರೆ
ವಸ್ತು, ವಿಷಯಗಳಾದರೆ ಸರಕಾರೀ ಕ್ಷೇತ್ರದ ಉದ್ಯೋಗಿಗಳಾದರು ಕಾರ್ಯಗ
ಳಿಗೆ ವಿರಾಮವೊದಗಿಸಲು ಹಿಂದರಿಯದೆ ಎಂಥ ಸನ್ನಿವೇಶದಲ್ಲು ಅವನ್ನು ಪಡೆ
ಯಲು ಪೂರ್ಣೋತ್ಸಾಹವನ್ನು ಪ್ರಕಟಿಸುತ್ತಾರೆ. ಆದರೆ ಸಾಹಿತ್ಯವೆಂದೊಡನೆ
ಮಾತ್ರ ತಾವು ಪ್ರಥಮ ದಿನಾಂಕದ ಧನಾಭಿಮಾನಿಗಳೆಂಬುದನ್ನು ವ್ಯಕ್ತಗೊಳಿ
ಸುತ್ತಾರೆ. ಅದೇ ದಿವಸ ಹೋದರೆ ಲಕ್ಷ್ಮಿಯಭಿಮಾನದ ಮುಂದೆ ಬೇರೆಲ್ಲ
ವಸ್ತು, ವಿಷಯಗಳ ಸಾಲು ವಿಜೃಂಭಿಸೀತೇ ಹೊರತು ಶಾರದೆಯ ಬಾಳು ನಡೆಯು

ಹೆಸ್ವಗೆತೆಸಿಯಾರೆ ? ಆದರಿಸಿಯಾರೆ ? ವಿನಾಶದ ಸಾಮೀಪ್ಯ ವರ್ಧಿಸುತ್ತಿರುವಂತೆ ಬೌದ್ಧಿಕ ಸೃಷ್ಟಿಗಳು ಪೂರ್ಣ ಜೀವನಕ್ಕೇನೇ ಅಸ್ಪೃಶ್ಯವಾಗಿ ಮನುಷ್ಯಪಥಕ್ಕೆ ದೂರತೆ, ಪ್ರತ್ಯೇಕತೆಗಳನ್ನು ಹೆಚ್ಚಿಸಿಕೊಳ್ಳುತ್ತಿವೆ. ನಡೆ, ನುಡಿಗಳೆಡೆ ನೆರಳನ್ನಾದರೂ ಸಾಮಾನ್ಯತೆ ಸುಳಿದಾಡಿಸದಾಗಿವೆ. ೪೩) ನಿಜವಾಗಿ ಯಾವನೇ ವೇಶ್ಯಾಪುತ್ರ, ಯಂಥ ಮಹಾರೋಗಿ ಕೂಡ ಬಿನ್ನೆಲೆಗಳಲ್ಲಿ ತಯಾರಿಸಿರುವ ವಸ್ತುಗಳನ್ನು ಜನರೆಂದು ಪೇಟೆಯಲ್ಲಿ ಧಾರಾಳವಾಗಿ ಕೊಂಡು ನಾನಾ ನಿತ್ಯಕಾರ್ಯಗಳಿಗೆ ಉಪಯೋಗಿಸುತ್ತಾರೆ. ಆದರೆ ಸದ್ವಿಚಾರಗಳಿಗೆ ಮಾತ್ರ ಹಲವರಿಂದು ಸಹಕರಿಸಲು ಸಿದ್ಧರಾಗುವುದು ತಮ್ಮ ಜಾತಿಯವನಿಂದ, ಗೋತ್ರದವನಿಂದ, ಪಕ್ಷದವನಿಂದ, ಸಂಸ್ಥೆಯವನಿಂದವು ರೂಪುಗೊಂಡಿವೆಯೆಂಬುದನ್ನು ತಿಳಿದಾಗ ಮಾತ್ರವೇ. ಹಾಗಿರದ ಮೇಲು ಬ್ರಾಹ್ಮಣರಂತಿರುವವರು ಸಾಧಾರಣವಾಗಿ ಅಸಹಕಾರದಿಂದ ಮುಸುಕಾಡುವುದಿಲ್ಲ. ಅಂತೆಸಗುವುದು ಸಾಧ್ಯವಾಗುವುದಿಲ್ಲ. ೪೪) ಬೇರೆ ವಸ್ತು, ವಿಷಯಗಳೊಂದಿಗೆ ವ್ಯವಹರಿಸುವವರಿಗೆ ಸತತ ಅಪರಿಮಿತವಾಗಿ ಸಹಕರಿಸುತ್ತ- ಅಧಿಕ-ಲಾಭಾಂಶಗಳೊಡನೆ ಹೆಚ್ಚಿನ-ಸುಖ, ಸೌಕರ್ಯಗಳನ್ನವರು ಹೊಂದುತ್ತಿರಲು-ನಿಜವಾದ ಸಹಾಯವನ್ನು ಸಲ್ಲಿಸುತ್ತಾರೆ. ಆದರೆ ಸತ್ಸಂದೇಶವಾಹಿಗಳಿಗೆ ಹೊತ್ತುಬಂದೀಯುವುದೇ ಮಹತ್ತರ ಸಹಾಯಗೈದಂತೆಂದು ಪರಿಗಣಿಸುವ ಸಂದರ್ಭಗಳನ್ನು ಹಬ್ಬುತ್ತಾರೆ. ೪೫) ಬಾನುಲಿಯ ಮೂಲಕ ಎಷ್ಟೋ ದೂರದ ಹಾಡುಗಾರನಿಗೆ ಸಹಕರಿಸಬಹುದು; ಚಲಚಿತ್ರ, ದೂರದರ್ಶನಗಳ ಮೂಲಕ-ಯಾವುದೋ-ಭಾಗದ ನಟನಿಗೆ ಪರೋಕ್ಷ ಪ್ರೋಷಣೆ ಸಲ್ಲಿಸಬಹುದು. ವಿಭಿನ್ನ ವಸ್ತುಗಳನ್ನು ಕೊಂಡು ನೂರಾರು ಯೋಜನಾಂತರದಲ್ಲಿರುವ ವಿಶ್ವಸೋದರರ ಬಾಳ್ವೆಗೆ ನೆರವಾಗಬಹುದು. ಆದರೆ ಪುಸ್ತಕ ಸಂಬಂಧದಲ್ಲಿ ಮಾತ್ರ ಸ್ಥಳೀಯರನ್ನು ಮಾತ್ರವೇ ಪ್ರೋತ್ಸಾಹಿಸುತ್ತೇವೆಂದು ಫಲ ತಳೆಯುತ್ತವೆ ಹಲವಾರು ಸುಶಿಕ್ಷಿತ ಮಂಡೂಕಗಳು. ಗೌರೀವರನ ಪಟ್ಟಣದಲ್ಲಿ ಆಚಾರ ವಿದ್ಯಾಲಯದವನೇ ಬೀಗೆಸಗಿದ. ಅನಾಚಾರದಲ್ಲಿ ಪ್ರಾರಂಭಿಕ ತರಬೇತಿ ಹೊಂದಿದವರೇ ಇಲ್ಲಿಂದ ಹೊರಡುತ್ತಿರಬಹುದೋ ಸಂಶಯವಾಯಿತು. ೪೬) ದುರ್ವಸ್ತು, ದುರ್ವಿಷಯಗಳ ಮಟ್ಟಿಗಾದರೆ ಮರಣಪರ್ಯಂತರವೂ ಧಾರಾಳವಾದ ಆಸಕ್ತಿಯನ್ನು ಬಹಳಷ್ಟು ಮಂದಿ ಮುಂದರಿಸುತ್ತಾರೆ. ಆದರೆ ಪುಸ್ತಕಗಳ ಬಗ್ಗೆ ಬಾಳ್ವೆಗೆ ಮೂಲಭೂತವಾಗಿ ಅತ್ಯನಿವಾರ್ಯವಾದ ತೀವ್ರ

ಗಳನ್ನು ಸಲ್ಲಿಸುತ್ತಿರುವುವೆಂದು ವಿದ್ಯಾರ್ಥಿಗಳಾದರೂ ಸಾಮಾನ್ಯವಾಗಿ ಅವುಗಳೆಡೆಗೆ ನಿಜವಾದ ಭಕ್ತಿ, ರಕ್ತಿಗಳನ್ನು ತಳೆದಿರುವುದಿಲ್ಲ. ೪೭) ಜೀವನಪಥದಲ್ಲಿ ದುರಾಸಕ್ತಿಗಳು ಯಾವೆಡೆಯೋ ಪ್ರಬಲವಾಗಿ ಬೆಸೆದುಕೊಳ್ಳುತ್ತವೆ. ಸುಜ್ಞಾನದ ತೀಕ್ಷ್ಣವಾದ ಖಡ್ಗಗಳು ಸಹ ಮತ್ತವನ್ನು ಬೇರ್ಪಡಿಸುವಲ್ಲಿ ಸೋಲುತ್ತವೆ ಹಾಗೆಂದು ದೀರ್ಘವಾದ ಸಹಚರ್ಯದಿಂದಲೂ ಸತ್ಸಂದೇಶಗಳಲ್ಲಿ ಶ್ರದ್ಧೆ ಮನಸ್ಸನ್ನು ಕಲೆಯುವುದಿಲ್ಲ. ೪೮] ಬೇರೆಲ್ಲ ವಸ್ತು, ವಿಷಯಗಳ ಬಗ್ಗೆ ತಮ್ಮ ಬದುಕಿಗೆ ಸಲ್ಲುತ್ತಿರುವುವೆಂದು ವ್ಯಕ್ತಿಗಳಿಗೆ ಸಹಜಾಭಿಮಾನವಿರುತ್ತದೆ. ಅದರೆ ಸಾಯುವಂತೆ ಹಾಸುಹೊಕ್ಕಾಗಿ ಸೇರಿ ಸುಖ, ಸೌಕರ್ಯಗಳನ್ನು ನಿರ್ಮಿಸಿದ್ದರು ಸದ್ವಿಚಾರಗಳ ಮಟ್ಟಿಗೆ ಕೃತಜ್ಞತಾರಹಿತವಾದ ನಿರಭಿಮಾನವೇ ವ್ಯಾಪಿಸಿರುತ್ತದೆ. ಸಮಾಜ ದೇಹವನ್ನು ಗುರುತಿಸಲೆಂದು ಹಡೆದವರಿರಿಸಿದ ಹೆಸರನ್ನು ವಿಚಾರಿಸಿಕೊಂಡು ಬರುವುದು, ಪರಿಚಿತ, ಸಂಬಂಧಿಗಳ ಕುರಿತು ತಿಳಿಸುವುದು ಮುಂತಾದವುಗಳಿಂದ ಕೃತಕಾಭಿಮಾನವನ್ನು ಉತ್ತೇಜಿಸಬೇಕಾಗುತ್ತದೆ. ಅಂತರಂಗದಲ್ಲಿ ಬೇರುಬಿಟ್ಟಿರುವ ಕುದಿಸಂಕೀರ್ಣತೆಯನ್ನು ತಣಿಸುವ ಈ ರೀತಿಯಿಂದಲೇ ಲೇಖಕರಾದವರು ಸಾಧಾರಣವಾಗಿ ಸಹಕರಿಸಲು ಸಿದ್ಧರಾಗುವುದು. ಬೇರೆ ವ್ಯವಹಾರಗಳಲ್ಲಿ ಇಂಥವುಗಳ ಅನಿವಾರ್ಯತೆಯಿರುವುದಿಲ್ಲ. ಯಾವನೇ ಬಂದರೂ, ದೀರ್ಘಕಾಲಕ್ಕೆ ಸಲ್ಲುವುದೆನಿಸಿ ಅತ್ಯಲ್ಪ ಸಮಯದಲ್ಲೇ ಮುದುಡುವ ವಸ್ತುವನ್ನೇ ನೀಡಿದರು ಹೆಚ್ಚಿನಾದರ, ಸತ್ಕಾರಗಳು ಜನರಿಂದ ಪ್ರವಹಿಸುತ್ತವೆ. ಅಮೇರಿಕೆಯ ವಿದ್ಯಾಲಯವೊಂದರಲ್ಲಿ ಆಂಗ್ಲದಲ್ಲಿ ಸಂಭಾಷಿಸುತ್ತ ಬಂದವನೊಬ್ಬ ಕೀಟನಾಶಿ ಔಷಧವನ್ನು ಸಿಂಪಡಿಸಿದ ಬಗ್ಗೆ ಕೆಲವು ತಾಸುಗಳ ಕಾರ್ಯಕ್ಕೆ ೪೫೦ ರೂಪಾಯಿಗಳನ್ನು ಪಡೆದುಕೊಂಡನಂತೆ. ಅಷ್ಟು ಸಿರಿಯಿರುವ ಕಡೆಗಳಲ್ಲೂ ಸಾಹಿತಿ ಮಾತ್ರ ಮಾನಿತನಾಗುವುದು ವಿರಳವೇ. ಬುದ್ಧಿಜೀವಿಗಳೆನ್ನಿಸಿದವರೇ ಯಾವೆಡೆ ಸರಿಯುತ್ತಿರುವರೆಂಬುದಕ್ಕೆ ದೃಷ್ಟಾಂತ. ೪೯] ಬೇರೆಲ್ಲ ವಸ್ತು, ವಿಷಯಗಳೊಂದಿಗೆ ತಮ್ಮ ಬಾಳ್ವೆಗೆ ನೇರವಾದ ಸಂಬಂಧಗಳಿರುವುದನ್ನು ಜನರು ತಿಳಿದುಕೊಳ್ಳುತ್ತಾರೆ. ಆದರೆ ಸಾಹಿತ್ಯ, ಸತ್ಸಂದೇಶಗಳ ದಿಕ್ಕಿನಲ್ಲಿ ಮಾತ್ರ ಹಾಗಿಲ್ಲ. ಯಾವಾವುದೋ ಬಾದರಾಯಣ ಸಂಬಂಧಗಳನ್ನು ಹೇಳಿ ಪ್ರವೃತ್ತಿಗತೀತವಾದ ಪ್ರೀತಿಯನ್ನು ಅವರಲ್ಲಿ ಕೃತಕವಾಗಿ ಕೊನರಿಸಬೇಕಾಗುತ್ತದೆ. ೫೦] ಅನ್ಯ ವ್ಯವಹಾರಗಳಿಗೆಲ್ಲ ಆಧುನಿಕರು ಸ್ವಚ್ಛಂದವಾಗಿ

ಸಹಕರಿಸುತ್ತಾರೆ. ಆದರೆ ಸತ್ಸೇವೆಗಳಿಗೆ ಸಹಕರಿಸಲು ಮಾತ್ರ ನಾನಾ ನಿರ್ಬಂಧಗಳನ್ನು ಅನ್ವಯಿಸುತ್ತಾರೆ. ಗದಗಿನಲ್ಲಿ ರಾಜಕಾರಣಿ ಪಾಟೀಲರೊಂದಿಗೆ ಸಂಪರ್ಕವಿರಿಸಲಿಲ್ಲವೆಂದು ಬೆಂಗಳೂರು ನಗರದ ನೀರಾವರಿ ಇಲಾಖೆಯ ಆಡಳಿತ ವಿಭಾಗದಲ್ಲೊಬ್ಬ ಅಧಿಕಾರಿ ನಾಮಪ್ರಮಾಣದಲ್ಲಿ ಪಾನೀಯಕ್ಕಲ್ಲದೆ ಪ್ರಕಾಶನಕ್ಕೆ ಸಹಕರಿಸುವುದರಿಂದ ಹಿಂಜರಿದ. ಈ ಬಗ್ಗೆ ಕನಿಷ್ಠ ಸಹಕಾರಕ್ಕೆ ಸಹ ವಿದ್ಯಾಸಂಸ್ಥೆಗಳ ದಾಖಲಾತಿಗಳು, ಗಣ್ಯರ ಪತ್ರಗಳೇ ಮುಂತಾದುವು ಹಲವರಿಗೆ ಬೇಕಾಗುತ್ತವೆ. ಮಿತ್ರಾದೇಶಗಳು ಅಗತ್ಯವಾಗುತ್ತವೆ. ೫೧] ಬೇರೆ ಕ್ಷೇತ್ರಗಳಿಗೆ ಹಣವನ್ನು ಧಾರಾಕಾರವಾಗಿ ಸುರಿಯುತ್ತ ಮಹೋದಾರಿಗಳಂತೆ ವರ್ತಿಸುವ ಜನರು ಸಾಹಿತ್ಯ, ಸತ್ಕಾರ್ಯಗಳ ಮಟ್ಟಿಗೆ ಮಾತ್ರ ಕೃಪಣಾಗ್ರೇಸರ ರೀತಿ ಯಾವಾಗಲು ಬಿಗಿಮುಷ್ಟಿ ಧರಿಸುತ್ತಾರೆ. ೫೨] ದುರ್ವಿಷಯಗಳಿಗೆ ಈಡಾಗ ಈ ಕ್ಷಣ ಬೇಕಾದರು ಪರಮಾವಧಿ ಸಹಕಾರ ನೀಡಲು ಸಿದ್ಧರಾಗುತ್ತಾರೆ.ಆದರೆ ಸತ್ಕಾರ್ಯಗಳ ಮಟ್ಟಿಗೆ ಸಲ್ಲಿಸಲಿರುವ ಕನಿಷ್ಠ ಸಹಕಾರವನ್ನು ಸಹ ಸತತವಾಗಿ ಮುಂದೂಡುತ್ತಿರುತ್ತಾರೆ. ೫೩] ಮಾಸಿಕ ವೇತನದ ಪದ್ಧತಿಯಲ್ಲಿ ಕ್ರಮವನ್ನು ಮುಂಗಡ ನೀಡುತ್ತ ಮೂವತ್ತು ದಿನಗಳು ಸರಿಯುವ ಮೊದಲು ತಮಗೇನಾದರು ಮೃತ್ಯು ತಪ್ಪಿದರೆ ಅಥವಾ ಉದ್ಯೋಗದಾತೃವಿಗೆ ಯಾವುದೊಂದಾಕಸ್ಮಿಕದಿಂದ ಬರಬಡಿದರೆ ತಮಗೆ ತಲುಪಲಿರುವ ಅತ್ಯಧಿಕವಾದ ನಿಶ್ಚಿತ ಮೊತ್ತಗಳ ಗತಿಯೇನೆಂದು ಯಾರಾದರಾತಂಕ, ಶಂಕೆಗಳನ್ನು ತಳೆಯುವುದಿಲ್ಲ. ಅದಕ್ಕಾಗಿ ಪ್ರತಿಯೊಂದು ಕ್ಷಣವೂ ಪ್ರತಿಫಲವನ್ನು ಪಡೆಯುತ್ತಿರುವುದೇ ತಾವು ಗೈಯುವ ಕಾರ್ಯವಾಗಬೇಕೆಂದು ಪುಣ್ಯಕ್ಕೆ ನವಪ್ರಭುಗಳಿನ್ನೂ ಛಲ ತಾಳಿಲ್ಲ. ರಂಜನೆ, ವಿಲಾಸಗಳಿಗೆ ಯಥೇಚ್ಛವಾಗಿ ಮುಂಗಡ ನೀಡಿ ಬುದ್ಧಿ, ವಿಚಾರಗಳನ್ನು ಕುದಿಸಿಕೊಂಡು ತಡೆಯಲಾರದ ತಲೆನೋವನ್ನೇ ಹೊರತು ಜನನಾಗರಿಕತೆಯ ಪಣೆಗಳು ಪ್ರತಿಭಟನೆಯ ಬಾಲವನ್ನು ಬಿಚ್ಚುವದಾಗಿಲ್ಲ. 'ಆಹಾರಗೃಹಗಳಲ್ಲಿ ಗುಣಮಟ್ಟವಿರದ ತಿಂಡಿ ಅತ್ಯಲ್ಪ ಪ್ರಮಾಣದಲ್ಲಿ ದೊರೆತರು ಅಧಿಕ ದರವನ್ನು ಮುಟ್ಟಿಸಬೇಕಾಗಿರುವುದಕ್ಕೆ ತೃಪ್ತಿಯೂ ಆಕ್ಷೇಪಿಸುವಂತಿಲ್ಲ. ಇವೆಲ್ಲ ಸಾಮಾನ್ಯತಃ ನಡೆಯುತ್ತಿರುವ ಘಟನೆಗಳಾಗಿವೆ. ಸಕಾಲದಲ್ಲಿ ಪುರಸಭಾಧಿಗಳಿಗೆ ವೇತನಗಳನ್ನು ಮುಟ್ಟಿಸಲು ಸರಕಾರವೇ ಬೇಕಷ್ಟು ಬಾರಿ ಹಿಂತಿರುಗಿಸಿದ ಸನ್ನಿವೇಶಗಳಿವೆ. ಮೂರು ತಿಂಗಳುಗಳ ದಾಟಿರುವ ಪಾತ್ರೆ

ಗಳಿವೆ. ಇಂಥೆಲ್ಲ ವಿದ್ಯಮಾನಗಳಲ್ಲು ಸಾಹಿತ್ಯ ವಾಹಿಗೆ ಅತ್ಯಲ್ಪ ಪ್ರಮಾಣದ ಮುಂಗಡ ನೀಡುವುದಕ್ಕೂ ಹೆಚ್ಚಿನವರು ಹಿಂದುಳಿಯುತ್ತಾರೆ, ಕೆಲವರು ಗಡ ಗಡನೆ ನಡುಗುತ್ತಾರೆ. ವಿಧವಿಧಗಳ ಸಂಶಯಾತಂಕಗಳನ್ನು ತಳೆಯುತ್ತಾರೆ. ಇವುಗಳ ಬಗ್ಗೆ ನೋಡಿ, ಪರಿಶೀಲಿಸಿ, ಕೊಂಡು, ಪಡೆಯುವ ರೀತಿಯೊಂದನ್ನೇ ತಾವಾಂತಿರುಪವರೆಂದು ಬಹುಮಂದಿ ಸ್ಪಷ್ಟೀಕರಿಸುತ್ತಾರೆ. ೨೪) ಬೇರೆ ಕ್ಷೇತ್ರಗಳಲ್ಲಿ ನಾನಾ ತರಗಳಿಂದ ಪದೇ ಪದೇ ವಂಚನೆಗಳಿಗೆ ಗುರಿಯಾಗುತ್ತಿರುವವರು ಸಹ ಮುಗ್ಧ ಸಾಹಿತ್ಯಸಾಧಕಗಳನ್ನು ಬಗೆಬಗೆಗಳಲ್ಲಿ ವಿಶ್ವಾಸ ರಾಹಿತ್ಯದ ತಾಪತ್ರಯಗಳಿಗೆ ಕೆಡೆಸುವುದರಲ್ಲಿ ತಮ್ಮ ಚಾಣಾಕ್ಷತನವನ್ನು ಮೆರೆದು ಮದಸಂಕೀರ್ಣತೆಯು ಮೀಸೆ ತಿರುಗಿಸುತ್ತಾರೆ. ೨೫) ಮಾತೃಭಾಷೆ ಯಾವುದಿದ್ದರು ಸರಿಯೇ ನಾಡ ನುಡಿಯೊಂದರಿಂದ ಜೀವನಕ್ಕೆ ಬೇಕಾದ ಪರಂಪರೆಯು ತಿಳಿವುಗಳನ್ನೆಲ್ಲ ಲಭ್ಯವಾಗಿಸಬಹುದು. ಅದರ ಮೂಲಕವೇ ಸತತವಾಗಿ ವ್ಯವಹರಿಸಿ ವಿಪುಲ ಪ್ರಯೋಜನಗಳನ್ನು ಗಳಿಸುತ್ತಿರಬಹುದು. ಆದರದರಲ್ಲಿ ವಿಚಾರ ಭವನಗಳ ನಿರ್ಮಾಣವನ್ನು ಪ್ರೋತ್ಸಾಹಿಸುವುದೆಂದರೆ- ತಮ್ಮಾತ್ಮಗೌರವಕ್ಕೆ ಪ್ರಬಲವಾದ ಕುಂದೆಂದು ಸಾವಿರದಲ್ಲಿ ಒಂಭೈನೂರ ತೊಂಬತ್ತು ಮಂದಿಗಳನ್ನು ಮೀರಿರುವವರ ವಿಚಲನ ತಿಳಿದಷ್ಟೂ ಸಾಧ್ಯವಿದೆ ಪೃಷ್ಟಿಯಿರುತ್ತದೆ. ಇಂಥವನ್ನೆಲ್ಲ ಲಕ್ಷಿಸಿದರೆ ನಾಗರಿಕತೆಯಲ್ಲಿ ಬೌದ್ಧಿಕಾಸ್ವಸ್ಥತೆಯು ಜೀರ್ಣಿಗೆ ದಿನದಿಂದ ದಿನಕ್ಕೆ ಮೀರುತ್ತಿರುವುದನ್ನು ಯಾವ ಪರಾಧ್ಯಮದ ಪ್ರತಿಪಾದಕ ಕೂಡ ವಿರೋಧಿಸಲಾರನೆಂಬುದು ನಿಸ್ಸಂದೇಹ.

## ೨. ಕೆಲವನುಭವಗಳು, ವೀಕ್ಷಣೆಗಳು

ಅ. ಪ್ರಾದೇಶಿಕ- ೧) ಥರಥರನೆ ನಡುಗಿಸುತ ದೈತ್ಯ ತನು ನಾಡಿಗಳ ಬರಿದೊಂದು ನೋಟದಲೆ ಕೆಡೆಸಿ ಷಡ್ರಿಪು ಜಯುವ । ಮೆರೆಯುತಿರೆ ಭಕ್ತ ಭಾವಗಳಿಂದ ರೂಪಿತಾಲಂಕಾರ ತನುವ ತುಂಬ । ಧರಿಸಿ ಗದೆ ಹಸ್ತದಲಿ ರಾಮಲಕ್ಷ್ಮಣರೊಡನೆ । ಪರಮ ಜಾನಕಿ ಮಾತೆ ಶೋಭಿಸಿರಲಿದೆ ನಡುವೆ । ಹರಪನಹಳ್ಳಿಯ ತಟ್ಟಗೇರಿಯಲಿ ಕಂಡೆ ಭವ್ಯಾಕಾರ ಹನುಮಂತನಾ ।। ನೋಡಿದೊಡನೆಯೆ ಕೈಯ ಮುಗಿವ ಭಾವವುದಿಸುವುದು । ಮಾಡಲಾಸೆಯು ಬಹುದು ನೆನಪು ಮನದಡಿಯಲ್ಲಿ । ನೀಡಿ ಸಕಲಾಂಗಗಳ ಪದತಳಕೆ ನಯದಿಂದ ಹಾಡಬೇಕು । ತೀಡುತಲಿ ಭವಮಿಲಿತ ಕರ್ಣಗಳ ಕೋಳಿತೆಗೆದು ।

ಸಾಹಸವ ಕಣ್ಣದಿರು ಸೊಗದಿ ಕುಣಿಸಿ | ಗಣನೆ ಮೀರಿರುವಂಥ ಸೌಖ್ಯ ವಿನತರಿಗೂಡಿ | ಮಣಿಯಲೊಂದಾವರ್ತಿ ಭಾಗ್ಯೋಚ್ಚ್ರಗಳ ಹರಸಿ | ತೃಣವ ಸಹ ಚಿದ್ರಸದಿ ಭರಿತಾದ ಫಲವೆನಿಪ ಸಾಮರ್ಥ್ಯ ವಿದಿತ ಗೈವ || ಇತಿಹಾಸ ಸಂಬಂಧಗಳ ತಳಿದ ಗುಡಿಯೇರಿ | ಗತದ ಘನ ಸೂರಾರು ಯಜ್ಞಗಳ ಕಂಡವನೆ | ನುತಿಲಿ ಸ್ಥೈಮರೆತಿರಲು ಕಂಬದೊಳಗಿನ್ನೊಬ್ಬ | ಪತಿತ ಪಾವನ ಕಾಯ ನಿನ್ನೆಸಕ ಬಣ್ಣಿಪೆನೆ || ೫ ಧರ್ಮ ಗೂಢವ ತಿಳುಹುತಿರುವನೊ | ಮರ್ಮ ಶಿವತತ್ತ್ವಗಳದು ತೋರ್ಪನೋ | ಶರ್ಮದುನ್ನತ ವಿಭವ ಸೇರುವ ಪಥವ ದರ್ಶಿಪನೊ | ಕರ್ಮ ರಾಶಿಗಳನ್ನು ತೊಳೆಯುತ | ನಿರ್ಮಲಾಗಿಸುತಿಹನೊ ಜೀವರ | ಘೂರ್ಮಿಸುವ ಭವವಳಿಸಿ ನೋಟದಿ ಮೆರೆವನು ಕೊಟ್ಟೂರಿನಲಿ ಬಸವೇಶ್ವರ || ನಿನಗೆ ಕೈ ಮುಗಿಯುವರಿಗಾನು ಕೈಗಳ ಮುಗಿವೆ | ನಿನ್ನ ನುತಿಸುತಲಿಹರ ಭಜನೆಯ ಗೈವೆ | ನಿನ್ನ ಸೇವಿಸುತಿಹರ ಬಿಡದೆ ಮಾನಿಸುವಂಥ | ಸನ್ಮತಾಗಿಹ ಭಾಗ್ಯ ಸತತ ನನಗಿರಲಿ || ೬ ಹೊಳಲಗುಂದಿಯ ವಿಭುಗೆ ಮಣಿಯುತ | ಸಳಸಳಿಸುವುತ್ತುಂಗಿ ಜಗಪನ | ಕೆಳೆಲಿ ನಮಿಸುತ ಹಾಯುತಿಟ್ಟಗಿ ಹಗರಿ ಬೊಮ್ಮ ಸೆಳೆ | ತೊಳಗುತಿಹ ರವಿಕಿರಣ ನಡುವಲಿ | ಸೇವ್ಯ ಗಿರಿಗಳ ಸಂದಿ ಬಂದೆಯು | ಕಳೆದು ಹೊಲಸರು ನೋಟ ಪೊಗುವೆವು ನಾವು ಹೊಸ ಪೇಟೆ || ೭ ಚಿತ್ರಾಲಕ್ಷೋಟೆಯ ಜನರಿಗೆ ಕಾಲನನ್ನು ಮೀರಿ ಇತಿಹಾಸ ರಚನೆಗಳು ಈ ವರೆಗುಳಿದಿರುವುದೇ ಅತ್ಯಂತ ದೊಡ್ಡ ಹೆಮ್ಮೆಯ ವಿಚಾರವಾಗಿದೆ. ಇವರಿದಿರು ಭಾಷಾಪ್ರೇಮಾದಿ ಗುಣಗಳನ್ನು ಪಕ್ಕಕ್ಕಿವರು ಸರಿಸಿದ್ದಾರೆ. ಕಂಪ್ಲಿ ಮತ್ತು ಸುತ್ತಮುತ್ತಣ ಮಂದಿಗಳಿಗಾದರೆ ಹಾಗಲ್ಲ. ಚಾರಿತ್ರಿಕವಾದ ಮಹಾರಚನೆಗಳು ಕೂಡ ನಾಮಾವಶೇಷಗಳಾಗಿರುವುದನ್ನು ದಿನವಹಿ ನಿರುಕಿಸುತ್ತಿದ್ದಾರವರು. ಬಾನ್ನೋಟದಿಂದಲೇ ಶತ್ರುಗಳನ್ನು ದಗ್ಧಗೊಳಿಸುತ್ತಿದ್ದ ದೇವಿ ಇವರಿಗೆ ದೀನಸ್ಥಿತಿಯಲ್ಲಿರಬೇಕಾಗಿದೆ ! ಇವೆಲ್ಲವುಗಳಿಂದ ಕಾಲನ ಪ್ರಭಾವಗಳ ಕುರಿತು ಜನರು ಚಿಂತಿಸುವಂತಾಗುತ್ತದೆ. ಅವರ ಭಾವನೆಗಳು ವಿಶಾಲವಾಗುತ್ತವೆ. ಭಾಷಾಶ್ರದ್ಧೆಯೇ ಮೊದಲಾದ ಗುಣಗಳು ಅಷ್ಟಿಷ್ಟಾದರು ಅವರಲ್ಲಿ ಕೊನರುತ್ತವೆ. ಜೀವನದ ದುರವಸ್ಥೆಯ ಕುರಿತು ಪಂಪಾಪತಿ ಸದಾ ಜಾಗೃತಿಯನ್ನು ನೀಡುತ್ತಿದ್ದಾನೆ. ಶತಕ ಬಹಳೇರಿಳಿತ ತೋರುತ | ಚಿತೆಲಿ ನಿಂತಿಹ ರಚನೆ ನಿಚಯವು | ನುತಿಯ ತಳವನು ವಿರಾಟ ಹುಸಿಯು

ಸುತ್ತ ಭಾಗಗಳ | ತತಿಲಿ ಸತ್ಕಾರ್ಯ ಗೌರವ | ಗತಿಲಿ ಭಾಷಾಭ್ರಷ್ಟೆ ಸಂಸ್ಕೃತಿ | ನತಿಯು ಕಲೆಯಾದರವು ಸದ್ಗುಣ ವಿಕಸಿತಾಗಿಸಿದೆ || ೮ ತಾರಾ ನಗರವ ದಾಟುತ ಮುಂದಕೆ| ತೋರಣಗಲ್ಲನು ನೋಡುತಲಿ| ಭಾರೀ ಸಂಪತ್ತನು ಸಗ್ಗದಿಂದಲಿ ತಂದು | ಮಾರ್ತಾಂ ಹುದುಗಿದ ನೆಲೆಯೆನಲು | ಘೋರ ಭವತಾರಿ ನಾವೆಗಳಂತಿಹ | ಚಾರು ಜೆಟ್ಟಿದ ಗುಂಪ ಹಿಂದಿಕ್ಕಿಸಿ | ಯಾರಿಗು ನಿರ್ಮಿಸಲ ಸದಳ ಪಡಿಯಿರೆ | ಸಾಕ್ಷಿಪ್ರ ಸಂಡೂರಿಂದಲಿ ಬಳ್ಳಾರಿ || ೯ ಕೋರುತಲಿ ಲೋಕಗಳಿಗನುರತೆಯ ನಿಷ್ಠೆಯಿಂ | ಕೀರದಭಿ ಷೇಚನವನೆಸಗುತಲಿ ರಾಮ ಪದ | ಸಾಧನಗಳರ್ಚಿಸುತ ಸುಖಲೀನನಾಗಿರುವ ವರರಾಘವೇಂದ್ರ ಗುರುವು | ಬೀರುತಲಿ ಮುದಶಾಂತಿ ಭರ ಮಧುರ ಹಾಸವನು | ಸೇರಿಸುತ ಸದ್ಭಾವ ಬಳ್ಳಾರಿ ವಿಪ್ರಕುಲ | ಧಾರುಣೀ ಹಿತವ ತಹ ಕಾರ್ಯಗಳ ಬೆಂಬಲಿಪ ಬುದ್ಧಿಯನು ಮೂಡಿಸಿಹನು || ೧೦ ಎಮ್ಮಿಗನೂರಿಗೆ ಹೋದದ್ದು ಜಡೇತಾತನಿಗೊಂದು ನಮಸ್ಕಾರ ಹೇಳಲಿಕ್ಕೇ ಎನ್ನುವಂತಾಯಿತು. ೧೧ ಚಿತ್ತಾಲಕೋಟೆಯ ಜನರು ಘಟಸರ್ಪಗಳಂತೆ ಪ್ರಾಚೀನಾವಶೇಷಗಳನ್ನು ಕಾಯುತ್ತಿರುವುದರಲ್ಲೇ ಹಿರಿಮೆ, ತಿಳಿದಿರುವುದನ್ನು ಮುಂಕಣ್ಣು ಗುರುತಿಸಿದ. ಸುಮ್ಮನೆ ಕೋಟೆ ನೋಡುವುದಕ್ಕಾಗಿಯೇ ಅದನ್ನು ಹೊಕ್ಕಂತಾಯಿತು. ೧೨ ಹಿರಿಯೂರಿನಲ್ಲಿ ಪರ್ಣವೆರಿಪರ ಹಿಂದೆ· ಉಪಾಹಾರ ಗೃಹವೊಂದರ ತುಂಬ ಪುಷ್ಪಮಾಲಿಗಳ ಸಿಂಗಾರ ಶೋಭಿಸುತ್ತಿತ್ತು. ಈವಾಗ ಹೊಸ ಕಟ್ಟಡ ರಚನೆಯಾಗಿ ವ್ಯವಹಾರವು ಹೆಚ್ಚಿದೆ. ಧನಕ್ಕೆ ಪ್ರಾಧಾನ್ಯ ಮೂಡಿ ನಿಸರ್ಗಾಶ್ರಿತ ಅಲಂಕಾರಕ್ಕೆ ಪ್ರಾಶಸ್ತ್ಯವನ್ನು ದಮ್ಮ ಗೊಳಿಸಲಾಗಿದೆ. ೧೩ ಶನಿರಾಯನನ್ನು ಕಾಣಲಿಕ್ಕಾಗಿಯೇ ಪಾವಗಡಕ್ಕೆ ಹೋದಂತಾಯಿತು. ಕಂಡವರ ಬಹುವಿಧದಿ ಕಾಡುತಿಹ ಶನಿರಾಯ | ತಂಡ ತೋಟಲಿಗನು ನೀಡುತತಿ ಖತಿಭಲದಿ | ದಂಡಿಸಲು ಬೇಡೆಂದು ಕೋರುವೆನು ಸತ್ಕಾರ್ಯ ಸಹಕಾರವೆಸಗಿದವರ | ಪುಂಡ ಕಲಿವಿಭೂಷಿಸಿಟ್ಟಿಯಿಂ ಸುತ್ತಿಡೆಲಿ | ದಂಡು ಪುಷ್ಟಾಗಿಹುದು ಹುಸಿಯ ಬಹು ಸೆಳೆತಗಳ | ದಿಂಡುಗೆಡೆವು ಯಾಚಿಸುತಲಿರುವೆ ಮಿಾಂದರ ಸುಖ, ಭಾಗ್ಯ ಸವೆಸಬೇಡೈ || ೧೪ ಮನುಷ್ಯರನ್ನು ಮನುಷ್ಯರಿಂದ ಸಂರಕ್ಷಿಸಿಕೊಳ್ಳಲು ಕೆಲವಾರು ಶತಕಗಳ ಹಿಂದೆಯೇ ಚಿತ್ರದುರ್ಗದ ಏಳು ಕಲ್ಲಿನ ಕೋಟೆಗಳಂತಹ ರಚನೆಗಳ ಪ್ರಾಬಲ್ಯ ಅನಿವಾರ್ಯವಾಯಿತು. ಆದರೆ ಇಂದವಕ್ಕ ನೂರ್ಕಾಡಿ

ಬಲವತ್ತರವಾದ ಗೋಡೆಗಳನ್ನು ಕಟ್ಟಿಸಿಕೊಂಡರು ಯಾವುದೇ ಪ್ರಯೋಜನ ದೊರೆಯಲಾರದೆನ್ನಿಸುತ್ತದೆ. ನವಾರ್ಥಿಕ ವ್ಯವಸ್ಥೆಗಳಲ್ಲಿ ಇರುವಲ್ಲಿ ಕುಳಿತು ಕೊಂಡೇ ಸಾವಿರಾರು ಮೈಲುಗಳ ದೂರದಲ್ಲಿರುವ ಸೋದರರ ರಕ್ತ, ಮಾಂಸ ಗಳನ್ನು ಸಹ ಸ್ವಲ್ಪವೂ ಸುಳಿವು ಸಿಗದ ರೀತಿಯಲ್ಲಿ ತಿನ್ನುತ್ತಿರುವ ಜಾಣ್ಮೆ ಮಾನವರ ಒನಚರಿಗೊದಗಿದೆ. ೧೫ ಚಿತ್ರದುರ್ಗದಂಥ ಹಿರಿಕೋಟೆಗಳಲ್ಲಿ ನಾಗರಹಾವಿನಂಥ ಜಲಚ್ಚಿತ್ರಗಳನ್ನು ತೆಗೆದು ಬರೀ ಭೌತಿಕ ದೃಷ್ಟಿಯಿಂದಲೇ ಅವನ್ನು ವೀಕ್ಷಿಸುತ್ತಿರುವ ರೂಢಿಯನ್ನು ಬೇರೂರಿಸಿ ಬೆಳೆಸಲಾಗಿದೆ. ನಿಜ ವಾಗಿಂಥೆಡೆ ಅಧ್ಯಾತ್ಮಶೀಲರ ಮನೋವೈಭವಗಳನ್ನು ಜೀವಂತಗೊಳಿಸಿ ಕಣ್ಮುಂದೆ ಕುಣಿಸಲು ಸಾಧ್ಯವಿದೆ. ಆದರೆ ಸದ್ಯ ವಾಣಿಜ್ಯಮಯವಾಗಿರುವ ಜಗತ್ತಿನಲ್ಲಿ ಹಾಗಿರುವ ಪ್ರಯತ್ನಗಳನ್ನು ನಡೆಸುವವರು ಸಾಮಾನ್ಯವಾಗಿ ಗೋಚರಿಸದಾಗಿದ್ದಾರೆ. ೧೬ ಬಳ್ಳಾರಿಯಲ್ಲಿ ಹೋಳಿಯ ದಿವಸ ಬಣ್ಣ ನೀರಲ್ಲಿ ಮಿಂದ ಕೆಲವು ವೇಷಗಳು ಮಾತ್ರವೇ ಬೀದಿಗಳಲ್ಲಿ ಕಾಣಿಸುತ್ತವೆ. ಅವರಿ ಚಿತರಿಗೆ ಹೊರಬರಲು ಯಾವುದೇ ಭಯವಿಲ್ಲ. ಉತ್ತರಕರ್ನಾಟಕದ ಹಲವು ಭಾಗಗಳಂತೆ ಕಿಟಕಿ, ಬಾಗಿಲು ಅಥವಾ ಪಟಾರದ ದ್ವಾರವನ್ನೇ ಮುಚ್ಚಿ ಆಸಕ್ತಿರಹಿತರು ಮುದುಡಿ ಕೂಡಿರಬೇಕಾದ ಪರಿಸ್ಥಿತಿಯಿಲ್ಲ. ಚರಿತ್ರೆಯ ಕಾಲಗಳಲ್ಲಿ ಮೊಹಮ್ಮದೀಯರಿಗೆ ವಿರುದ್ಧವಾದ ಸಂಘಟನಾಕಾರ್ಯದಲ್ಲಿ ಇಷ್ಟೊಂದು ವೈಪರೀತ್ಯ ಆ ಕಡೆಗಳಲ್ಲಿ ಕಾಣಿಸಿಕೊಂಡಿರಬೇಕೆನ್ನಿಸುತ್ತದೆ.

ಆ ವ್ಯಕ್ತಿಸಂಬಂಧಿ– ೧ ತ್ಯಾಗ, ಸರಳತೆ, ಸೌಜನ್ಯ, ಶಿವಯೋಗ, ದಯೆಧರ್ಮವನುಕಂಪ ಪ್ರತಿರೂಪ ತಾನಿರುತ್ತ | ಬಾಗಿದವರನು ಪೊರೆವಂಥ ನಯಶೀಲ, ಭೇದಾಳಿ ರಿಕ್ತಾದ ಚೇತನದಲಿ ಸಿದ್ಧಿಯು | ಮೈಗೂಡಿದ ಘನ ವ್ಯಕ್ತಿತ್ವ ದರ್ಶಿಸಿ ಸುತ ಚಂದ್ರಶೇಖರ ಯತಿವರಗೆ ಶಿಷ್ಯರಾಗಿ | ರಾಗ ರಹಿತಾದ ನಡೆನುಡಿಗಳನಾಂತು ಶೋಭಿಪ ಶ್ರೀಚಂದ್ರ ಮೌಳೀಶರಿಗೆ ನಮನ || ಶಿಕ್ಷಣಾಗಸದೊಳು ಸಿರಿಗೆರೆಯ ಚಿದ್ಯೋಗಿ ಹುಬ್ಬಳ್ಳಿಯ ಮಠರಾಜರೇ ಕಾಣದ| ನಕ್ಷತ್ರಗಳ ಹೊತ್ತಿರಿಸಿ ನಾಲ್ಕೆಡೆಗೂನು ವಿಸ್ತರಿಸುತ್ತ ಹರಪನಹಳ್ಳಿ, ಕಿರಿ ದೂರನು 1 ದಕ್ಷತಾಸಮದಿಂದ ಭಾರತ ಮೂಲೆಮೂಲೆಯ ಧೀಮಂತವರ್ಯರ ತವರಾಗಿಸಿ 1 ರಕ್ಷಿಸಿರುವಿರಿ ವಿನುತಾರ್ಯ ಸಂಸ್ಕೃತಿ ತಮ್ಮುಚ್ಚ ಶೀಲವ ಬಣ್ಣಿಸೇ ತೆರ ಹುಂಬಾನು ll ಕರುಣೆ ಸಹಾನುಭೂತಿ, ಬಡತನವನ್ನು ಅರ್ಥ

ವಿಸುವ ಗುಣ ಮುಂತಾದುವನ್ನು ವಿಶೇಷವಾಗಿ ಈ ಸ್ವಾಮಿಯಲ್ಲಿ ವೀಕ್ಷಿಸುತ್ತೇನೆ.
ಹೌದು, ಇವರೊಂದಿಗೆ ವಂದ್ಯ ಶಿವಗಾಮಿಗಳ ಸಾಹಸಗಳು ಸಣ್ಣೊಂದು ಜನ
ಧಾಮದಲ್ಲಿ ನಗರತೇಜಸ್ಸನ್ನು ಮೂಡಿಸಿವೆ. ಚೇತನಕೆ ನಿಜಮೋದವೀಯುವ ।
ಪಾತಕಾರಿಗಳಾದ ಮೂರ್ತಿಗಳೊಂತು ಸುತ್ತೆಡೆ ಹರಸುತಿದ್ದಿರೆ ತುಲನೆಯಿರ
ದಂತೆ । ಭೂತಳದಿ ಹರನೊಂದು ಕಿರುಬೀ । ಡೀ ತೆರದಿ ವಿದ್ಯಾಲಯಾಗಲು ।
ಖ್ಯಾತಿಗೊಳಿಸುತ ಭವನ ಹರನಗರನಿತು ಶೋಭಿಪುದೊ ! ೨ ಎಲೆಮರೆಯ
ಕಾಯಿಯೊಲು ಸದ್ದು ಗದ್ದಲವಿರದೆ । ನಲುಮೆಯಿಂದಾತ್ಮವನು ಬೆರಸಿ ಸಂಸ್ಕೃತಿ
ಪಥದಿ । ಸಲೆ ಮೂರು ದಶಕ ಮೀರುತ ನಡೆಸಿ ಸಪ್ತಾಹ ಸಾಹಿತ್ಯ ಕೂಟ
ಗಳನು । ಬಲಿತ ಶಿಸ್ತಿನ ಬೋಧ, ಮೊದಲ ರಾಷ್ಟ್ರಪ ಕರದಿ । ಮಿಲಿತ
ಮಾನ್ಯತೆ ಗುರುವು, ಯತಿ ಸಚ್ಚಿದಾನಂದ । ಧೊಲವು ಗೆದ್ದಿಹ ಭಾಗ್ಯಯುತ,
ಸುರಸ ಕೃತಿಕರ್ತೃ ಗುಂಡಪ್ಪ ವೈ. ಯಸ್ಸರು ॥ ಧವಳ ತತ್ತ್ವಗಳೊಂದು
ಘನತೆ ಪಡೆದೊಲು ರೂಪ । ದಿವಿಜತೆಯೆ ತಲೆವಾಗುವಂಥ ನಯ ತೋರ್ದಂತೆ ।
ಸವೆಯುದೆಂದಿಗು ಮೆರೆವ ಗಣ್ಯ ಗುಣಗಳು ಕೂಡಿ ಯಶಕಾಯ ತಾಳಿದಂತೆ ।
ಭುವನ ನಮನಕೆ ಪಾತ್ರ ಶಿಕ್ಷಕವರೆನಿಸುವಂತೆ । ಕವದಿ ಜೈತ್ರೆಂಬತ್ತು ಕಳೆದರಪಿ
ಮಾನಸದಿ । ನವತೆ ತೋರೆಯುದ ದೀಪ್ತಿಸಂಯುತೊಬ್ಬರ ಕಂಡೆ ಹಿರಿದೆನಲು
ಚಿಂತಾಮಣಿ ॥ ಜೈವನಿರ್ಮಿತಿಯೋಜ ಕರಣಾಚರಯು ಮೀರಿಹುದು । ಯಾವ
ಮತಿಯೊಳಗೆಂಥ ಯೋಗ್ಯತಿದೆ ಬಲ್ಲಾರು । ಪಾವನಾಗಿರುವಂಥ ಸಾಧಕರ
ಕಜ್ಜಗಳು ದಾಟಿಹವೊ ಕಲ್ಪನೆಲ್ಲ । ತೀವಿ ಮನ ಸುವಿಚಾರ, ಸದ್ಭಾವ ರಸಚ
ಯದಿ । ಸಾವಿರ್ರೈನೂರನಿತು ಸಾಹಿತ್ಯಕೂಟಗಳ । ಜೀವವಿದು ನೆರವೇರಿಸಿ
ಹುದೆನಲು ಮನ ವಿಸ್ಮಯಡರುವುದು ಸಂಭ್ರಮೇರಿ ॥ ಹಲವಾರು ಮಕ್ಕಳ
ನಾಟಕಗಳನ್ನು ಬರೆದಿರುವ ಈ ಪಕ್ವಜೀವ ನಾಲ್ಕು ವರ್ಷ ಕೀರ್ತನಾ ಪ್ರಪಂಚ
ದಲ್ಲೂ ಸೇವೆ ಸಲ್ಲಿಸಿತ್ತಂತೆ ೩ ಅದೊಂದೂರಲ್ಲಿ ಮುಕ್ಕಣ್ಣ ತನಗಾದನುಭವ
ವನ್ನು ಹೀಗರುಹುತ್ತಾನೆ. ಹೇ ಪರಮೇಶ್ವರ ಶೆಟ್ಟಿ । ಗೃಹದಿದಿರಾದಾಗ ತಾ
ಛಟ್ಟಿ । ಹೊಸತೊಂದು ಭರವಸೆ ನೀ ಕೊಟ್ಟಿ । ನಿನ್ನನೆ ನಂಬಿದೆ ನಾ ಗಟ್ಟಿ ।
ಸಂತೆಲಿ ಸಾಗುತ ಕೈಕೊಟ್ಟಿ । ಕೂಡ್ಲಿಗಿಯಲ್ಲಿ ಹಾಗಾಗದೆ ಅದೇ ಹೆಸರಿನ
ವರು ತನ್ನ ಸಹೋದ್ಯೋಗಿಗಳ ಮೂಲಕವಾದರು ಸಹಕಾರ ಕೊಡಿಸಿದ
ರೆಂಬುದು ಸ್ತುತ್ಯ.

## ಇ -: ಘಟನಾನ್ವಿತ :-

೧] ಕೂಡ್ಲಿಗಿ ಪಟ್ಟಣದಲ್ಲಿ ನ್ಯಾಯವಾದಿಯೊಬ್ಬರ ಮನೆಗೆ ಹೋಗಿ "ಸ್ವಾಮಿ, ಸ್ವಾಮಿ" ಎಂದೆ. ಒಳಕ್ಕೆ ಕರೆದರು. ವಿಚಾರ ಹೇಳುವಷ್ಟರಲ್ಲೇ ವಕೀಲ ಮಹಾಶಯರಾಗಿ ತಾವು ಮುಟ್ಟಬಾರದಂಥ ಸ್ವಲ್ಪ ಪುಸ್ತಕಗಳನ್ನು ತಂದವ ಉಪಹಾರ ತೆಕ್ಕೊಳ್ಳುವ ಸಮಯದಲ್ಲಿ ಬಂದು ತೊಂದರೆ ಕೊಡಬಹುದೇ ಎಂದವರ ಕೋಪ ಮೀರತೊಡಗಿತು. ಬಹುಶಃ ಅಂಥವುಗಳನ್ನು ತಳಿದಿದ್ದೇನೆಂದು ಹೊಸ ದಲಿತ "ಬೇಪ್ರೀ. ಬೇಪ್ರೀ" ಎಂದು ಕೂಗಬೇಕಾಗಿತ್ತೇನೋ. ಅಸಭ್ಯ ಮಾತುಗಳು ಸಿಡಿದುವು. ಭಗವಂತನಿಗೇ ಪ್ರೀತಿಯಾಗಲೆಂದು ಜಗೆಯಬೇಕಾಯಿತು. ೨] ಸಂಡೂರಿನಿಂದ ಸುಬ್ರಹ್ಮಣ್ಯ ದೇವಾಲಯದೆಡೆಗೆ ರಾತ್ರಿಯ ವೇಳೆ ಹೊರಟಿದ್ದೆ. ಪಕ್ಕದಲ್ಲಿದ್ದ ಹಳ್ಳಿಗ ನನ್ನ ಕುರಿತು ತೀಮಕೊಂಡ. ಪಾದಗಟ್ಟೆಯ ಬಳಿ ನಾನಿಳಿಯಬೇಕಾಗಿತ್ತು. ಗ್ರಾಮಸ್ಥ ಕೂಗಿದ ಮೇಲೆ ಚಾಲಕ ತುಸು ದೂರ ಮುಂದ್ಹೋದು ನಿಲ್ಲಿಸಿದ. ದೇವಸ್ಥಾನಕ್ಕೆ ಹೋಗುವ ದಾರಿಗೆ ಸೇರಲು ಹತ್ತಾರು ಹೆಜ್ಜೆ ಹಿಂದಕ್ಕೆ ಬರಬೇಕಾಗಿತ್ತು. ಬದಿಯಲ್ಲಿ ದೀಪವಿಲ್ಲ. ಕೆಳಗಿನ ಕಾಲುಹಾದಿ ಬಿಟ್ಟರೆ ಕತ್ತಲಲ್ಲಿ ಮತ್ತಾವುದೂ ಗೋಚರಿಸುತ್ತಿರಲಿಲ್ಲ. ಏನು ಗೈಯುವುದೆಂದು ಗೊತ್ತಾಗದೆ ಚಾಲಕ ದ್ವನಿಗಳಲ್ಲಿ ಗುಡಿಯವರನ್ನು ಕೂಗತೊಡಗಿದೆ. "ದಯಮಾಡಿ ಬನ್ನಿ" ಎಂದು ನೊರೆದ ಬಳಿಕವೇ ಅವರಿಂದ ಸಹಾಯ ಲಭ್ಯವಾದುದು. ಅಪ್ಪಿತಪ್ಪಿ ಚಾಲಕ ಇನ್ನಷ್ಟು ದೂರ ಮುಂದ್ಹೋದಿದ್ದರೆ ಬಹುಶಃ ಸ್ಥಿತಿ ಅತ್ಯಂತ ಚಿಂತಾಜನಕವಾಗುತ್ತಿತ್ತು. ಮುನ್ನಡೆವ ಬಗೆ ಗೊತ್ತಾಗದೆ ಜಡಿಯಲ್ಲಿ ಮುದುಡಿ ಮಾರ್ಗದಲ್ಲೇ ರಾತ್ರಿಯನ್ನು ಕಳೆಯಬೇಕಾಗುತ್ತಿತ್ತೇನೋ. ಕರುಣಾಶಾಲಿ ತಾರಕಾರಿಯೇ ಸಂರಕ್ಷಿಸಿದ. ಮರುದಿನ ಮುಂಜಾನೆ ಸೂರ್ಯನೆಂಬ ಅದ್ವಿತೀಯ ಕಲಾವಿದ ಬಣ್ಣದ ಕಿರಣಗಳನ್ನು ಹೊಮ್ಮಿ ಸ್ವಲ್ಪ ಸ್ವಲ್ಪವಾಗಿ ವಿವರಿಸುತ್ತಿರುವ ಸುಂದರ ಸೃಷ್ಟಿಯಲ್ಲಿ ರಮಣೀಯ ಪರ್ವತಾವಳಿಗಳ ಮಧ್ಯೆ ಪರಿಶೋಭಿಸುತ್ತಿರುವ ತರುಣ ಸ್ಕಂದದೇವನನ್ನು ವೀಕ್ಷಿಸಿ ಹೃದಯ ಪರಿಪೂತವಾಯಿತು. ೩] ಸಂಡೂರಿನಲ್ಲಿ ರೋಗಿಗಳನ್ನು ಕಾದು ಕಾದು ಬೇಸತ್ತಿರುವ ವೈದ್ಯನೊಬ್ಬ ಮುಂಗಡೆ ಶಂಖವೊಂದನ್ನಿರಿಸಿರುವುದನ್ನು ಲಕ್ಷಿಸಿದಾಗ ಅಸಹಕಾರದ ಪರಿತಾಪದಲ್ಲಿಯೂ ನಗುವಲೆ ಮೂಡಿತು.

ಲೋಭವಿಶೇಷವ ಕಂಡು | ಮನುಜಪುಷ್ಕದಿ ಶಾನು ಬಾಳಲಸದೇನೆಂದು | ವನ ಜನಾಭನು ತಾನು ವೈಕುಂಠಕೋಡಿದನು || ಬೂದಿಯನು ಬಳಿದವರ ಕಾರ್ಯ ಹೀನತೆ ನೋಡಿ | ಪೇದವನು ತಾಳುತಿ ಮುಂದಿಲ್ಲಿ ನೆಲಸೆಂದು | ವೇದಪಿತಶಿರ ಹರಣ ಕೈಲಾಸದೆಡೆ ಜಿಗಿದ || ಕಾಣೆ ಭುವಿಯನು ಸದ್ಯ ಬೊಮ್ಮ ನಭದಿಂದಿಳಿದ | ರಾಣಿಕೆರೆಯಲಿ ನಡೆವ ಮಿಗಭೋಗಗಳು ತೋರೆ | ಗೋಣು ತಗ್ಗಿಸಿ ರಾತ್ರೋರಾತ್ರಿ ಹಿನ್ನೆಗೆದ || ೨] ಹೌದು, ಜಗತ್ತಿನಲ್ಲಿ ಸ್ವಲ್ಪವಾದರು ನೈರ್ಮಲ್ಯ ನೆಲಸಿದ್ದರಲ್ಲವೇ ಪರಮಾತ್ಮನಿಗಾದರು ತಾನಿಲ್ಲಿ ಪರಿಶೋಭಿಸಿರಬೇಕೆಂಬ ಭಾವ ಉಂಟಾಗುವುದು ! ಅದರ ಬದಲು ಜನರ ನಡೆನುಡಿಗಳಲ್ಲಿ ಅಲ್ಲಲ್ಲಿ ವಾಹನ ನಿಲ್ದಾಣಗಳಲ್ಲಿ ಸಿಗುವ ಕಕ್ಕಸುಗಳ ಸ್ಥಿತಿಗಳಂತಾದರೆ ? ಮನಗಳಲ್ಲಿ ವಿಷಯಸಾಂದ್ರತೆ ಹೆಚ್ಚಿ ಹೊರವಟ್ಟಣಗಳ ಮಾಲಿನ್ಯಗಳಿಗೇ ಸರಿಸಾಟಿಯಾದರೆ ? ಬಾಳ್ವೆಯಲ್ಲಿ ವರ್ಧನಾಪೇಕ್ಷೆಗಳಿಗಿಂತ ವಿನಾಶಪ್ರವೃತ್ತಿಗಳೇ ನಿರಂತರವಾಗಿ ಪ್ರಿಯವಾದರೆ ? ಇಂಥ ದುರ್ಗತಿ, ದುಸ್ಥಿತಿಗಳನ್ನು ಬದಲಾಯಿಸುವ ಶಿಕ್ಷಣವನ್ನು ನೀಡುವುದಕ್ಕಿಂತ ವಿಲಾಸಗಳ ವ್ಯಾಪ್ತಿಯೇ ಪ್ರಸಾರಮಾಧ್ಯಮಗಳಿಗೆಲ್ಲ ಕರ್ತವ್ಯವೆನ್ನಿಸಿದರೆ ? ಸುಧಾರಕರಿಗೆ ಮಾನ್ಯತೆಯಿಲ್ಲ, ಸ್ಥಳೀಯ ಪತ್ರಿಕೆಗಳಿಗಾವುದೇ ಸಾಫಲ್ಯವಿಲ್ಲ, ಸನಿಹದ ನಗರರಕ್ಷಕರಿಗೆ ತಡೆಯುವ ಧೈರ್ಯವಿಲ್ಲವೆನ್ನಿಸಿದರೆ ? ಕಲಿಮಾಯೆ, ಕ್ರಿಮಿ, ರೋಗ, ದಾರಿದ್ರ್ಯಗಳನ್ನು ಕೂಡಿಸಿ ಭೂಮಿಯದು ನಿಮ್ಮದೇ ಸ್ಥಿರವಾದ ನೆಲೆಯಾಗಿರಲೆಂದು, ಹರಸಿ ಪರಮಾತ್ಮ ದೂರಾಂತರಿಕ್ಷಕ್ಕೆ ಸಾಗದಿರುತ್ತಾನೆಯೇ ? ಲಕ್ಷಾಂತರ ಜನರು ಅತ್ಯಂತ ಶ್ರದ್ಧೆಯಿಂದ ಪ್ರಾರ್ಥನಾಪ್ಸಾನಗಳನ್ನು ಸಲ್ಲಿಸಲಿಲ್ಲವಾದರೆ ಮರಳಿ ತೋರಿಯಾನೇ ನಾತ ? ೩ ಹಲವು ಸಾಮೂಹಿಕ ಸ್ಥಾನಗಳಲ್ಲಿರುವ ಶೌಚಾಲಯಗಳನ್ನು, ಅವುಗಳಲ್ಲಿ ಭುಗ್ಗೆಂದು ಹಾರುತ್ತಿರುವ ಕ್ರಿಮಿಕೀಟ ಸಮೂಹಗಳನ್ನು ಕಂಡರೆ ಆರೋಗ್ಯ ಇಲಾಖೆ, ನಗರಸಭೆ ಮುಂತಾದವರು ನವನಾಗರಿಕತೆಯೊಡನೆ ಪ್ರೀತಿಯಾಗಿ ಜೀವಂತಿಕೆಯನ್ನೇ ಕಳೆದುಕೊಂಡಿದ್ದಾರೋ ಅಥವಾ ಜನರನ್ನು ನೂರಾರು ಸಂಖ್ಯೆಗಳಲ್ಲಿ ಬೇಗಬೇಗನೆ ಸಾಯಿಸಲು ವ್ರತವಾಗಿ ಪಣತೊಟ್ಟಿದ್ದಾರೆಯೇ, ವಿಶೇಷವಾದ ಕೈಕಾಣಿಕೆಗಳನ್ನು ಪಡೆದು ವೈದ್ಯರಿಗೆ ಸುಗ್ಗಿಯುಂಟಾಗಿಸುತ್ತಿದ್ದಾರೆಯೇ ಸಂದೇಹವುಂಟಾಗುತ್ತದೆ. ೪ ನೀವೊಂದು ಪ್ರಯಾಣ ನಡೆಸುತ್ತಿದ್ದೀರೆನ್ನಿ. ಬೇರೆ ಬೇರೆ ತರದ ತಿಂಡಿಗಳಿಂದ ನಿಮ್ಮಾರೋಗ್ಯ ಸಹ

ಕಟ್ಟಿರಬಹುದು. ನಿಮಗೊಮ್ಮೆ ಕಕ್ಕಸಿಗೆ ಹೋಗಬೇಕಾಯಿತೆಂದು ನೆನೆಯೋಣ ಪಟ್ಟಣವೊಂದರಲ್ಲೇ ವಾಹನನಿಲ್ದಾಣದಲ್ಲಿ ಹೋದರೆ ಅಲ್ಲಿನ ಸ್ಥಿತಿ ದೆವ್ವಗಳಿಗೆ, ಮೃಗಗಳಿಗೇನೇ ಪ್ರೀತಿಯಾಗಬೇಕು. ಅನಿವಾರ್ಯತೆಯ ಹತಿಯಿಂದಾಗಿ ಆರೋಗ್ಯಾಸಕ್ತಿಯನ್ನು ಕುಂದಿಸಿಕೊಂಡ ಹೊಸದಲಿತರು ಪ್ರವೇಶಿಸಿಯಾರೇ ಹೊರತು ಹಲಸೆಡೆ ನೀರು ತರುವವರಿದ್ದಾಗಲು ನಿಜವಾಗಿ ಸಭ್ಯರು ಹೋಗುವಂತಿರುವುದಿಲ್ಲ. ಆವೂರೀವೂರೆನ್ನದೆ ಹೋದೆಡೆ। ದೇವನು ನಿಶ್ಚಿತ ನಿಲಸೆಂದರುಹುತೆ! ಜೀವದ ಭಾವನೆ ಜೊರೆಗಳಿಗಿಲ್ಲನೆ ತೋರುವ ಶೌಚಗೃಹ। ಜೀವನದಾಯುಗೆ ಕತ್ತರಿ ಬೀಸುತ। ತೀಪಿದ ಸಂಖ್ಯೆಯ ತಗ್ಗಿಸೆ ನೆರವನು। ಗೈವುವೆ ನರಕವ ಸಾಕ್ಷಾತ್ಕರಿಸುವೆ ಸಭ್ಯತೆಯಿದೆ ನರನ ॥ ಬಡಿದಿರೆ ಮಲಿನತೆ ನಡೆನುಡಿ ಕೆಣಕಣ। ಪಡೆಯು ವಿಕಾರದ ಕೊಬ್ಬಿಸಿ ನೊರೆಸಮ। ಬೆಡಗಿನ ಸುಖಗಳ ಪ್ರೇಷಿತ ಗೈಯುತ ನೀಚತೆ ಬೀಗಿಸುತ। ಪಡೆಯುತ ನಾನಾ ಬಗೆ ಹೀನತೆಯಲಿ। ದುಡಿತವದಿಲ್ಲದೆ ಸಂಪದಗಳ ಕೆಡು। ಗಡಣಕೆ ಧಾರೆಯ ನೆರೆವುದು ನಾಗರಿಕತೆಯೇನಿದೆ ನರನ ॥ ದುರಾಕರ್ಷಣೆಗಳಿಗೆ ಬಾಗಿ, ನೈಚ್ಯಪರರಾಗಿ ವಿವಿಧ ವಿಲಾಸಗಳಿಗೆ, ಮದ್ಯಗೃಹಗಳಿಗೆ, ದ್ಯೂತಗಳಿಗೆ ವಿಪರೀತವಾಗಿ ವಿತ್ತವನ್ನು ಧಾರೆಯೆರೆಯುತ್ತಿರುವ ಜನರಿಗೆ ತಮ್ಮೂರಿಗೆ ಆಗಮಿಸುವಾತನ ಅನಿವಾರ್ಯತೆಗಾಗಿ ಶುಚಿಯಾದ ಕಕ್ಕಸಿರಿಸೋಣ ಎಂಬ ವಿಷಯವನ್ನು ಕೂಡ ತಿಳಿಸಿಕೊಡಬೇಕಾಯಿತೆ? ಇಂಥ ತಿಳಿವನ್ನು ಹೊಸದೊರೆಗಳ ತಲೆಯಲ್ಲಿ ಕೂರಿಸಲು ಪ್ರಸಾರಮಾಧ್ಯಮಗಳೆಲ್ಲ ವಿಫಲವಾದುವೆಂದ ಮೇಲೆ ಇವುಗಳ ಸ್ಥಿತ್ಯಕ್ಕೆ ಯಾವ ಪ್ರಯೋಜನ ಲಭ್ಯವಾದಂತಾಯಿತು? ನವನಾಗರಿಕತೆಯ ತುಚ್ಛಾಂಶಗಳನ್ನು, ಹೀನ ವ್ಯಾಮೋಹಗಳನ್ನು ಪ್ರಸಾರ ಗೈಯುವುದಷ್ಟೇ ಇವುಗಳ ಗುರಿಯೋ? ಇಂಥ ಕೆಟ್ಟ ಮಾಧ್ಯಮಗಳನ್ನು ವಿವೇಕಿಗಳು ಯಾಕೆ ಬಹಿಷ್ಕರಿಸಬಾರದು? ಜೀವನದ ಸೌಖ್ಯಕ್ಕೆ ಮೂಲಭೂತವಾದ ಆರೋಗ್ಯದ ಪ್ರಜ್ಞೆಯನ್ನೇ ಸ್ಫುರಿಸಲು ಇವುಗಳಿಗೆ ಸಾಧ್ಯವಾಗಲಿಲ್ಲವಲ್ಲ। ಈ ಕೆಲವರು ಹತ್ತು, ಹದಿನೈದು ರೂಪಾಯಿಗಳನ್ನು ಬೇಕಾದರು ತೆತ್ತು ಶೌಚಕ್ಕೆ ಹೋಗುವುದಕ್ಕಾಗಿಯೇ ಅಲ್ಲಲ್ಲಿ ಕೋಣೆಗಳನ್ನು ಹಿಡಿಯುವುದಿದೆ. ಬಡತನ ಕವಿದ ರಾಷ್ಟ್ರವೊಂದರಲ್ಲಿ ಈ ರೀತಿಯು ಮುಂದುಗಾಣಿಕೆ ಶೋಭೆಯೋ? ಹಾಗೆಸಗಿ

ವರು ಸಹ ಪೊಕ್ಕಿಡೆ ಬೇರೆ ನೀರೆ ಹೋಗಬರುವಂತಹ ಮಲಿನತೆ ಬೆಳೆದಿರು
ತ್ತದೆ. ಅವರು ಸಹ ಅದನ್ನು ಸುಧಾರಿಸಬೇಕೆಂಬ ಗೋಜು, ತಪ್ಪಿಯೂ
ಯಜಮಾನನಲ್ಲಿ ಸುಳಿಯುವುದಿಲ್ಲ. ಹಾಗಿದ್ದರು ದುರ್ವ್ಯಸನಗಳ ಬಗೆಗಾತ
ಯಾವುದೇ ರೀತಿ ಹಿಂದುಳಿಯುವುದಿಲ್ಲ. ಜನರು ಹಿಂದೆಲ್ಲ ಗೈದಿರುವ ಪಾಪ
ಗಳನ್ನು ಕಳೆದುಕೊಳ್ಳಲೆಂದೇ ಪ್ರಯಾಣ ನಡೆಸುತ್ತಿರುವ ಹಾಗಾಯಿತೇ ?
ಅಲ್ಲಲ್ಲಿ ತೋರುವ ಶೌಚಾಲಯಗಳು ನರಕ ಸೃಷ್ಟಿಗಳೇ ? ಅವುಗಳ ಮೇಲ್ವಿ
ಚಾರಣೆ ನೋಡಿಕೊಳ್ಳುತ್ತಿರುವವರು ನಿಜವಾದ ಯಮಕಿಂಕರರೇ ? ಸಮಾಜ
ದಲ್ಲಿ ಕೆಲವರು ಸ್ವಸ್ವದಿಂದ ಅತ್ಯಧಿಕ ಶ್ರೀಮಂತಿಕೆಯನ್ನು ಪೊರಕಿಸಲೆಂದು
ಅವರಿಂದ ಕೈಕಾಣಿಕೆಗಳನ್ನು ಪಡೆದು ಹೀಗಿರುವ ಅಘೋಷ್ಯವಸ್ಥೆಯನ್ನು
ಮುಂದರಿಸಲಾಗುತ್ತಿದೆಯೇ ? ನವ ಶಿಕ್ಷಣ ಆಧುನಿಕರಲ್ಲಿ ತಮ್ಮ ದೇಹ, ಬಟ್ಟೆ
ಗಳ ಸ್ವಚ್ಛತೆಯೆಡೆಗೆ ಮಾತ್ರವೇ ರಕ್ತಿಯನ್ನು ಹೆಚ್ಚಿಸಿ ತಮಗಿಂತ ಹಿರಿದಾದ
ಸಮೂಹಕ್ಕೆ ಸಂಬಂಧಿಸಿದ ಸ್ಥಾನಗಳ ನೈರ್ಮಲ್ಯದ ಕಡೆಗಿನ ಲಕ್ಷ್ಯವನ್ನು
ನಾಶಕ್ಕೆ ದೂಡಿತೇ ? ಪೊಡವಿಯೊಳೆನಿಬರ ಗತಿಯೆಂತಿದ್ದರು । ಬಿಡಗಿನ
ತೊಡುಗೆಯು ತನಗಿದ್ದರೆ ಸರಿ । ಪಡೆಯುತ ಕುಂದುವ ಜನಸಂಗ ಗುಂಪಲಿ
ಗೌರವ ಕಳಕೊಂಡು । ತಡೆಯದೆ ತನ್ನ ಸಮೂಹವು ಸೇರುವ । ಕಡೆಗಳ
ಬಿಟ್ಟುತಲಿಹ ಮಾಲಿನ್ಯವ । ನಡೆವುದು ಮಿಗವಿಲ್ಲೆನಿಪುದು ನಾಗರಿಕತೆ
ಯಾಯ್ತೇ ನರನ ॥ ೬ ಹಿಂದೆ ಪುರುಷರಿಗೆ ಪ್ರಾಧಾನ್ಯವಿದ್ದಾಗ ಸಮಾಜ
ವನ್ನು ಅಧಾರ್ಗಂಟವಸ್ಟುವನು ಭ್ರಷ್ಟಗೊಳಿಸಿದರು. ಸದ್ಯ ಸ್ತ್ರೀಯರೂ ಅವರಿಗೆ
ಸಮಾನವಾದ ಪ್ರಾಧಾನ್ಯವನ್ನು ಲಭ್ಯವಾಗಿಸಿ ಮನುಷ್ಯಪಥವನ್ನು ಪೂರ್ತಿಯಾಗಿ
ಭ್ರಷ್ಟತಾಲಯವನ್ನಾಗಿಸುವುದರಲ್ಲಿ ತಮ್ಮ ಮೇಲ್ಮೆಯನ್ನು ಮೆರೆಯುತ್ತಿದ್ದಾರೆಂದು
ತೋರುತ್ತದೆ. ಅಲ್ಲಲ್ಲಿ ನಡೆಯುವ ಅವ್ಯವಹಾರಗಳ ತಾಂಡವಗಳು ಘನವಾಗಿದಕ್ಕೆ
ನಿದರ್ಶನಗಳಾಗಿವೆ. ಸಾಮಾನ್ಯವಾಗಿ ಸತ್ಸಹಕಾರಗಳಿಗೆ ಬರದೇತಟ್ಟಿರುವ ಜನಾಂಗ
ದವರು, ವಿದ್ಯಾರ್ಥಿಗಳು ಕಿರುಪಟ್ಟಣವೊಂದರಲ್ಲು ಹರಡಿರುವ ಹತ್ತಾರು ಚಿತ್ರಮಂ
ದಿರಗಳ ಪೂರೈಕೆಯೇ ಮುಂತಾದವುಗಳಿಗೆ ಯಾವೆಡೆಯಿಂದ ಹಣವನ್ನು ದರೋಡೆ
ಗೈದು ತಂದಿರುತ್ತಾರೋ ಗೊತ್ತಾಗುವುದಿಲ್ಲ. ಸಾಧಾರಣವಾಗಿ ಮಂತ್ರಿಗಳನ್ನು
ದುಂದುಗಾರರೆಂದು ಜರೆಯಲಾಗುತ್ತದೆ. ಆದರೆ ತಮ್ಮೂರಲ್ಲಿ ಮಾತ್ರವಲ್ಲ,
ಹಲವೂರುಗಳಿಗೆ ಹೋಗಿ ದುರ್ವ್ಯವಹಾರಗಳನ್ನು ಪರಿಪೋಷಿಸುತ್ತಿರುವಲ್ಲಿ

ಅಭೂತಪೂರ್ವ ವಿಕ್ರಮವನ್ನೇ ತಳೆದಿರುವ ಪ್ರಭುಗಳನ್ನಿಂದು ಕಾಣುತ್ತೇವೆ. ೭ ದುರ್ವಿಷಯಗಳು ಜೋರಾಗಿ ಕರೆಯುತ್ತವೆ. ಅವುಗಳೊಂದಿಗೆ ಬೇಗನೆ ಸಹಚರ್ಯ ಬೆಳೆಸಬಹುದು. ಆದರೆ ಮೆಲ್ಲನೆ ಅದರಿಂದೊದಗುವ ದುಃಖದ ಪರಿಣಾಮಗಳನ್ನು ಮಾತ್ರ ನಿವಾರಿಸಲು ಬಹಳ ಸಮಯ ಬೇಕಾಗುತ್ತದೆ. ಸದ್ವಿಚಾರಗಳು ಹಾಗೆ ಆಹ್ವಾನಿಸುವುದಿಲ್ಲ. ಅವುಗಳೊಂದಿಗೆ ನಿಧಾನವಾಗಿ ಕಲಿಯಬಹುದು. ಆದರೆ ಶೀಘ್ರವಾಗಿ ಯಾವತ್ತಿಗು ಮಾಸದಿರುವಂಥ ಸತ್ಪರಿಣಾಮಗಳನ್ನವು ಸ್ಥಾಪಿಸುತ್ತವೆ. ಕರೆದಿರೆ ತುಚ್ಛಾಕರ್ಷಣೆ ಬಲದಲಿ | ಭರದಿಂದವುಗಳ ಕೇಂದ್ರ ಸಮೀಪಿಸಿ | ಬೆರೆಪರು ಮನ ನೀಚತೆಯಲಿ ಶೋಕದ ತಿವಿತದಿ ನಲುಗುವರು | ಧರಣಿಲಿ ಬುದ್ಧಿ, ವಿವೇಕವ ತಳೆದಿರು | ವರಿಗೊಪ್ಪಿದ ಗತಿಯೇನಿಂಥವು ದಿಟ | ಗುರಿ ಭಂಗಿಸುತಿರುವುದೆ ನಾಗರಿಕತೆ ಹಿರಿದೆಂಬೆಯ ನರನ || ೮ ಧಾರಾಕಾರವಾಗಿ ಸುರಿಯುತ್ತಿರುವ ನೀರಿದ್ದಾಗಲು ಶೌಚಗೃಹಗಳನ್ನು ಚೊಕ್ಕಗೊಳಿಸದೆ ಹಿಂಬರುವವರ, ಸಾಮಾಜಿಕ ಸಂದರ್ಭಗಳಲ್ಲಿ ಬೇರೆಯವರಿಗೆ ಬೇಕೆಂದೇ ತೊಂದರೆಯುಂಟಾಗಿಸುವವರ ಸಂಸ್ಕೃತಿ, ಸಭ್ಯತೆಗಳು ಜೀವಂತ ಮೌಲ್ಯಗಳನ್ನೆಲ್ಲ ಕಳೆದುಕೊಂಡಿವೆಯೆಂದೇ ನಿಶ್ಚಯಿಸಬಹುದಾಗಿದೆ. ೯ ರಾಜಕೀಯ, ಶಿಕ್ಷಣ, ವ್ಯಾಪಾರ ಯಾವ ಕ್ಷೇತ್ರವನ್ನು ಹೊಕ್ಕರು ಇಂದದೊಂದು ದೊಡ್ಡ ಸ್ಮಶಾನವೇ, ಅಗಣಿತ ಶವಗಳ ರಾಶಿಯೇ ಗೋಚರಿಸುತ್ತದೆ. ಇಂಥ ಸಂದರ್ಭಗಳಲ್ಲಿ ಭಾಷಾಭಿಮಾನ, ಸಮಾಜ ಗೌರವ, ಸಂಸ್ಕೃತಿಶ್ರದ್ಧೆ ಮುಂತಾದವುಗಳನ್ನು ಅಷ್ಟಿಷ್ಟು ಪ್ರಮಾಣದಲ್ಲಾದರು ತಳೆದಂಥ ಚೇತನಗಳು ವ್ಯಕ್ತವಾದಾಗ ಅತೀವಸಾದ ಹರ್ಷವುದಿಸುತ್ತದೆ. ಜಡಶಿಲೆ ಬಾಳಿವು ನಿರ್ಜೀವಾಲಯ | ಪಡೆಯಲಿಕಾರವೊ ನುಡಿಯೊಳ ದೀಪ್ತಿಯ | ಗಡ ದೂರಟ್ಟನೆ ಸತ್ಸಂದೇಶದಿ ಸಂಬಂಧೆಲ್ಲವನು | ಪೊಡವಿಂದಲಿ ಸಿರಿಯಿಲ್ಲದೆ ಮೇಲ್ಮೆಯ | ಗಿಡದೊರಕಿಪ ಮನ ಮೂಡದು ತಪ್ಪಿಯು | ಮಿಡಿಯುವು ಸಂಸ್ಕೃತಿಗೆನೆ ನಾಗರಿಕತೆಯೇನಿದೆ ಮಾನವನ || ೧೦ ಸರಕಾರೀ ಕ್ಷೇತ್ರಗಳಲ್ಲಿ ನಾನಾ ಕಾರ್ಯಗಳ ಬಗ್ಗೆ ಕೈಕೊಡುಗೆಗಳ ಸ್ವೀಕಾರ, ಮೇಲಧಿಕಾರಿಗಳ ಸಂತೃಪ್ತಿಯನ್ನು ವಿವಿಧ ತಂತ್ರಗಳಿಂದಾದರು ಗೆಲ್ಲುವವರಿಗೆ ಪಟ್ಟಗಳ ಪ್ರಾಪ್ತಿ ಮುಂತಾದ ದುರ್ವ್ಯವಹಾರಗಳು ನಡೆಯುತ್ತಿರುವುದು ಎಲ್ಲರಿಗೂ ಗೊತ್ತಿರುವಂಥದೇ. ಆದರೆ ವೈಯುಕ್ತಿಕ

ಸಂಗಗಳಲ್ಲಿ ಇನ್ನಷ್ಟು  ಸ್ವಾರಸ್ಯಕರವಾದ ವಿದ್ಯಮಾನಗಳೆಲ್ಲ ನಡೆದಿರುತ್ತವೆ. ವಾಹನಭಾಗಾದಿ ಸಾಮಗ್ರಿಗಳನ್ನು ಮಾರುವವರು ನೇರ್ಪಡಿಸುವವರ ದುರಾಶೆಗಳನ್ನು ಪದೇ ಪದೇ ತಣಿಸುತ್ತಿರದಿದ್ದರೆ ಗ್ರಾಹಕರ ಮೂಲಕ ಪರಿಕರಗಳು ಹೊಂದಿಕೆಯಾಗುವುದಿಲ್ಲವೆಂದು ಹಿಂಕಳಿಸಲಾಗುತ್ತದೆಯಂತೆ. ರಶೀದಿಯೊಯದೆ ತೆರಿಗೆ ತಪ್ಪಿಸಿ ತಗ್ಗಿದ ಕ್ರಯಗಳಲ್ಲಿ ಮಾರುವವರಿಗೇ ಗಿರಾಕಿಗಳು ಹೆಚ್ಚುವುದರಿಂದ ಪ್ರಾಮಾಣಿಕರಿಗೆ ತೊಂದರೆಯಂತೆ. ಕಲಿಕಾಲದಲ್ಲಿ ಗುಣಿಗಳಿಗೆಷ್ಟು ಕಷ್ಟ, ನಷ್ಟಗಳು. ಮತ್ತೊಂದೆಡೆ ಜನರ ಬಲವಂತಗಳಿಗೆ ಮಣಿದು ಸುಳ್ಳು ದಾಖಲೆಗಳನ್ನು ನೀಡಿದ ವೈದ್ಯರು ನ್ಯಾಯಾಲಯದಲ್ಲೇನಾದರದು ವಿದಿತವಾದರೆ ಬೇರಾರಿಗೋ ಕೊಟ್ಟಿರುವುವೆಂದು ತಪ್ಪಿಸಿಕೊಳ್ಳುವರಂತೆ. ಸಮರ್ಥರಿಗೆ ಕಾಯಿದೆಗಳನ್ನು ನುಂಗುವುದಾದರು ಸಾಹಸದ ಮಾತಾಗುವುದಿಲ್ಲ. ಜೀವನ ಸಲಹುವ ದೋಣಿ ಹಿರಿದೊಂದಿಗೆ । ಪಾವನ ಕಜ್ಜವ ತಳೆದಿಹ ವೈದ್ಯರೆ । ಯಾವುದೊ ವಿಧದಲಿ ಸಿರಿಯನು ಸೆಳೆಯುವ ಮೋಹಕೆ ವಶರಾಗಿ । ತೀವಿದ ದುಷ್ಟತಿ ತಣಿಸದ ಬಡವನ । ನೋವನು ಹೆಚ್ಚಿಸಿ ನಿರ್ದಾಕ್ಷಿಣ್ಯದಿ । ಸಾವಿಗೆ ದೂಡುತಲಿರುವುದು ನಾಗರಿಕತೆಯೇ ಮಾನವನ ॥ ೧೧ ವಿದ್ಯಾವಂತರು ತಪ್ಪು ದಾರಿಯಲ್ಲಿ ಸಾಗುವಾಗ, ದುರಭ್ಯಾಸಗಳಿಂದ ದೇಶದ ಸಂಪತ್ತನ್ನು ವ್ಯರ್ಥವಾಗಿ ಕೆಡಿಸತೊಡಗಿದಾಗ ಕಡಿಮೆ ಕಲಿತಿರುವವರಿಗಾಗಲೀ, ವ್ಯವಸ್ಥಿತ ಶಿಕ್ಷಣ ಪಡೆಯುತಿರುವವರಿಗಾಗಲೀ ಆತನನ್ನು ತಡೆಗಟ್ಟುವ ಹಕ್ಕಿರಬೇಕು. ಅಂಥ ಸ್ಥಿತಿ ನಿಜವಾದ ಪ್ರಜಾಪ್ರಭುತ್ವ. ವಿವೇಕಕ್ಕಾಗ ಮನುಷ್ಯ ಪಟ್ಟವನ್ನು ಕಟ್ಟಿದಂತಾಗುತ್ತದೆ. ಆದರೆ ಸವ್ಯದ ಪರಿಸರದಲ್ಲಿ ವಿದ್ಯೆ ಪಡೆಯುದವನಾಗಲೀ, ಕಡಿಮೆ ಕಲಿತಿರುವವನಾಗಲೀ ಹಾಗೇನಾದರೂ ಗೈದರೆ ದವಡೆಮೋಕ್ಷವನ್ನೇ ಪಡೆಯಬೇಕಾದೀತು. ದುರ್ಗತಿಯನ್ನಾತ ಆಹ್ವಾನಿಸಿದಂತಾದೀತು. ಯಾವ ರೀತಿಯಿರಲಿ, ಪರಂಪರಾಗತವಾದ ಹೆಚ್ಚಿನ ತೀವ್ರಗಳನ್ನು ಪೋಷಕಿಸಿದವರನ್ನು ಗುರುಗಳೆಂದೇ ಸಾಮಾನ್ಯರು ಭಾವಿಸಬೇಕಾಗಿದೆ. ಹಾಗೆಯೇ ನಡೆದಿದ್ದಾರೆ ಕೂಡ. ಆದ್ದರಿಂದಲೇ ಇಂದಿರುವುದು ನಿಜವಾದ ಪ್ರಜಾಪ್ರಭುತ್ವವಲ್ಲವೆಂದು ತೀರ್ಮಾನಿಸಬಹುದಾಗಿದೆ. ಪ್ರಜಾ ಸುಪ್ರಭುತ್ವದ ದಿನಗಳು ತೊಲಗಿ ಪ್ರಜಾ ಸ್ವಪ್ರಭುತ್ವದ ಕಾಲ ಮೂಡಿ, ಕೊನೆ ಗಿಂದು ಪ್ರಜಾ ಅಪ್ರಭುತ್ವದ ಸನ್ನಿವೇಶಗಳು ಫಲಿಸಿವೆ. ಮೂರ್ಖತ್ವವೆ । ದಣಿಯಾಗಿ ರಾರಾಜಿಸುತ್ತಿದೆ. ಸೇರುತಲಿಹ

ಚಿಣ ವಾಹನ ನಿಲುನೆಲೆ | ಹಾರುತಲೊಬ್ಬಗೆ ಸಿಗಬೇಕಾಸನ | ಬೇರಾರಂಗವ್ರ ಮಿಡುಕಿರೆ ತನಗೇನೆನ್ನುತ ನುಗ್ಗಾಡಿ | ಗೀರುತ ಗುಂಪನೆ ತುಳಿಯುತ ಪಂ ಪೆಯ | ತೂರಿದ ಕೋತ್ಯಂಘೆಂಬೊಲು ಕಿಟಕಿಗ | ಳೇರುವ ಜನರನು ಕಾಣ್ಣೆ ನಾಗರಿಕೆನುವೆಯ ನೀನಿವರ ||

೧೨) ಸಂಕೀರ್ಣವಾದ ನವಾರ್ಥಿಕ ವ್ಯವಸ್ಥೆಗಳಲ್ಲಿ ತಮ್ಮ ಬಾಳ್ವೆ ಪ್ರೂರ್ತಿಯಾಗಿ ಸ್ವಾವಲಂಬನಾನ್ವಿತವಾದುದೆಂಬ ಭ್ರಮೆ ಜನರಲ್ಲಿ ಬೇರೂರಿದೆ. ಆದರೆ ವಾಸ್ತವಿಕವಾಗಿ ಅರ್ಥರೀತಿಗಳಲ್ಲೂ ಹಿನ್ನೆಲೆಯ ಕೋಟ್ಯಂತರ ಮಂದಿಗಳ ಪರೋಕ್ಷ ಸಹಕಾರವನ್ನವರು ನಿರಂತರವಾಗಿ ಅವಲಂಬಿಸಿದ್ದಾರೆ. ಪುಸ್ತಕ ವೊಂದು ಕೊಳ್ಳಲಿಕ್ಕೂ ಪತ್ರಿಕಾವಿಮರ್ಶೆಗಳನ್ನು, ಪರಿಚಯ ಪತ್ರಗಳನ್ನು, ವಿದ್ಯೆ ಯ ದಾಖಲಾತಿಗಳನ್ನು, ಗಣ್ಯರ ನಿರ್ದೇಶನಗಳನ್ನು, ಯಜಮಾನ ಅಥವಾ ಸಮೂಹಾಧ್ಯಕ್ಷನ ಸೂಚನೆಗಳನ್ನು ಅಪೇಕ್ಷಿಸುವ ಜೊರೆಗಳಲ್ಲಿ ಸ್ವಂತವಾಗಿ ಬುದ್ಧಿಗಳು ಕುಂದಿವೆಯೆಂದು ನಿರ್ಧರಿಸಬಹುದಾಗಿದೆ. ಇದನ್ನು ಸ್ಪಷ್ಟೀಕರಿಸು ವಂತೆ ಬಹ್ವಾರಿ ಮುಂತಾದೆಡೆ ಚುನಾವಣಾಸಮಯದಲ್ಲಿ ತಮ್ಮ ಗುರುತಿಗೆ ಮತ ನೀಯುವ್ರವರೊಂದಿಗೆ ಜೀರೆಯುವರಿಂದಲು ಹಾಗೆ ಗೈಸುವಂತೆ ಎಲ್ಲ ಪಕ್ಷಗಳು ನಿನಂತಿಗಳನ್ನು ಘೋಷಿಸುತ್ತವೆ. ನೈಜಾಲೋಚನೆಗಳ ಬದಲು ಯಾವಾವುವೋ ಪ್ರಭಾವಗಳನ್ನು ನವ್ಯರು ಬೆಂಬತ್ತುತ್ತಿದ್ದಾರೆಂಬುದಕ್ಕೆ ಇದಕ್ಕಿಂತ ಬೇರೆ ಪುಷ್ಟೀ ಕರಣ ಬೇಕಾಗದು. ವೈಚಾರಿಕ ದೀಪ್ತಿಯನ್ನು ಕಳೆದುಕೊಂಡು ವಿಕಾರಗಳಿಗೆ ದಾಸರಾಗಿರುವವರಿಗೆ ಬಾಹ್ಯ ಪ್ರಭುತ್ವ ದೊರಕಿದರು ಸಹ ಯಾವ ಪ್ರಯೋಜನ ವನ್ನು ತಂದೀತು ? ೧೩) ಹೌದು, ಮನಸ್ಸಾದರು ಹೊಟ್ಟೆಯಂತೆ ಸೀಮಿತ ವಾದೊಂದು ಸೆಲೆ. ಹೆಚ್ಚು ಹೆಚ್ಚಾಗಿ ದುರ್ವಿಷಯಗಳನ್ನೇ ಅದರಲ್ಲಿ ತುಂಬ ತೊಡಗಿದರೆ ಸದ್ವಿಚಾರಗಳಿಗೆ ಮುಂದಲ್ಲಿ ಹೇಗವಕಾಶ ದೊರೆಯಬೇಕು ? ವಿಚಾ ರಗಳು ವಾಯುಮಾಪದಲ್ಲಿದ್ದು ಮನಸ್ಸು, ಹೃದಯಗಳಿಂದ ಕೂಡಿದ ಆಂತರಂಗಿಕ ಶರೀರ ಜೀವಂತಿಕೆಯೊಂದಿಗೆ ಮುಂಬರಿಯಬೇಕಾದರೆ ಅವುಗಳೊಡನೆ ಸತತ ಸಂಪರ್ಕ ಹೊಂದಿರುವುವರ ಸಂಗಡ ನಿರಂತರವಾದ ಸೇವನೆ ಜರಗುತ್ತಿರಬೇಕು. ಅವರೊಂದಿಗೆ ಆಗಾಗ ಭಾವಜಲವನ್ನೂ ಸಹ ಪಾನಗೈಯುತ್ತಿರಬೇಕು. ಇವು ಗಳಲ್ಲಿ ಯಾವುದಾದರು ಮಾಲಿನ್ಯ, ಶತ್ರುಕ್ರಿಮಿಗಳು ಸೇರಿದ್ದು ಚಿತ್ತಕಾಯಕ್ಕ ದರ ಬೆರಕೆಯಾದರೆ ರೋಗವು ದುಃಖವೂ ಭವರೋಗವನ್ನು ತಳೆಯುತ್ತದೆ.

ಆದರೆ ಜಗವಿಷಯಗಳು ಹೀಗಲ್ಲ. ವಿಚಾರ, ಭಾವಗಳ ವಿವಿಧ ಪ್ರಮಾಣಗಳ ಬೆರಕೆಯಲ್ಲಿ ಗಟ್ಟಿಗೊಂಡು ಮೂಡಿರುವ ಸಂಕೀರ್ಣ ರೂಪಗಳವು." ಸದ್ಭಾವ-ಸದ್ವಿಚಾರಗಳ ಮಿಲನದಿಂದ ಸದ್ವಿಷಯಗಳು ಮೈದಳೆದರೆ ದುರ್ಭಾವ, ದುರ್ವಿಚಾರಗಳ ಕೂಡಿಕೆಯಿಂದ ದುರ್ವಿಷಯಗಳು ಉತ್ಪನ್ನವಾಗುತ್ತವೆ. ಸದ್ವಿಷಯಗಳನ್ನು ಮಿತಪ್ರಮಾಣದಲ್ಲಿ ಸೇವಿಸಿದರೆ ಅವುಗಳಿಂದ ವ್ಯಕ್ತಿತ್ವ ಶಕ್ತಿ, ಸುಖ, ಶಾಂತಿಗಳನ್ನು ಧುಸುತ್ತದೆ. ದುರಾಕರ್ಷಣೆಸಹಿತವಾದ ದುರ್ವಿಷಯಗಳು ಸ್ವಲ್ಪವಾದರು ದುಷ್ಟಟ, ದುರಭ್ಯಾಸಗಳೆಡೆಗೆ ಸಾಗಿಸಿ ಮನುಷ್ಯನನ್ನು ತಡೆಯಲಾರದ ದುಃಖಕ್ಕೆ ತಳ್ಳುತ್ತವೆ. ಹಸಿವಾದಾಗ ಮಾತ್ರ ಉಣ್ಣಬೇಕಲ್ಲದೆ, ರುಚಿಕರವಿದ್ದರು ಸರಿಯೇ ಆಹಾರಗಳನ್ನು ಅಧಿಕವಾಗಿ ಭಕ್ಷಿಸಿದುದಾದರೆ ಅದರಿಂದ ಜಠರ ವ್ಯಾಧಿಗೀಡಾಗಿ ಜೀರ್ಣಶಕ್ತಿಯನ್ನು ಕಳೆದುಕೊಳ್ಳುತ್ತದೆ. ಅದೇ ರೀತಿ ತಿಳಿಯಬೇಕೆನ್ನುವ ತಕ್ಕಷ್ಟು ಕುತೂಹಲದ ಹಿನ್ನೆಲೆಯಿಲ್ಲದೆ ತುಂಬಿದ ಮನದೊಳಕ್ಕೆ ವಿಷಯಗಳನ್ನು ಹೊಗಿಸತೊಡಗಿದರೆ ಅವು ನಾನಾ ದೌರ್ಜನ್ಯಗಳನ್ನು ಮೂಡಿಸಿ ಬೌದ್ಧಿಕ ಸಾಮರ್ಥ್ಯವನ್ನು ಕುಂದಿಸುತ್ತವೆ. ಭಗವಂತನಲ್ಲಿ ಅಪವಿಶ್ವಾಸ, ಸದ್ವಿಚಾರ, ಸತ್ಪಥಗಳಲ್ಲಿ ತಿರಸ್ಕಾರ, ಮೀರಿರುವ ಸಂಶಯಭಾವ ಮೊದಲಾದವು ಉತ್ಪನ್ನವಾಗುತ್ತವೆ ; ನಡೆನುಡಿಗಳಲ್ಲಿ ಭಿನ್ನತೆ, ಅಪ್ರಾಮಾಣಿಕತೆ, ನಿರಾಶೆಗಳು ಹೆಚ್ಚುತ್ತವೆ. ಚಾಪಲ್ಯರಹಿತವಾಗಿ ಸುತ್ತಿಡೆಯಷ್ಟೇ ಆಹಾರ ವಸ್ತುಗಳನ್ನು ನೋಡಿದರು ಪರವಾಗಿಲ್ಲ. ಆದರವನ್ನು ಅಧಿಕವಾಗಿ ತಿನ್ನುವುದರಿಂದಷ್ಟೇ ಜಠರಕ್ಕೆ ಹಾನಿ ತಟ್ಟುತ್ತದೆ. ಅದೇ ತೆರ ವಿಷಯಗಳ ಸಾಮ್ರಾಜ್ಯ ಹಲವಲ ಪ್ರಕಾರಗಳಲ್ಲಿ ಸುತ್ತಿಡೆ ವಿಸ್ತರಿಸಿದರು ಚಿಂತಿಲ್ಲ. ಪರಿಚಿತರೊಂದಿಗೆ ಸಂಭಾಷಣೆ, ಬಾನುಲಿ, ದೂರದರ್ಶನ, ಧ್ವನಿಮುದ್ರಿಕೆ, ಚಲಚಿತ್ರ ಮೊದಲಾದವುಗಳಿಂದವನ್ನು ಸಾಕಾರಪಡಿಸಿ ಮನದೊಳಕ್ಕೆ ಪ್ರವೇಶವಾಗಿಸತೊಡಗಿದರೆ ಅದು ಮಾತ್ರ ವಿಪತ್ಕಾರಿ. ಆಹಾರಗಳನ್ನು ನಿಧಾನವಾಗಿ ಜಗಿದು ನುಂಗಬೇಕಲ್ಲದೆ ವೇಗವಾಗಿ ಉದರದೊಳಕ್ಕೆ ಬಿಸುಡುವುದು ಕ್ಷೇಮದಾಯಕವಲ್ಲ. ಅದೇ ಪ್ರಕಾರ ಬಾನುಲಿ, ಚಲಚಿತ್ರ, ದೂರದರ್ಶನಾದಿಗಳು ರಭಸದಿಂದ ವಿಷಯಗಳನ್ನು ನುಗ್ಗಿಸುವುದರಿಂದ ಮನಸ್ಸಿನ ಶಕ್ತಿಗಳಿಗವು ಆಘಾತಕಾರಿಯಾಗುತ್ತವೆ. ಮತಿವೇಗದೊಡನೆ ನಿರಂತರವಾಗಿ ಪರ್ಯಟನ ಗೈಯುತ್ತಿರುವ ಸ್ವಭಾವವನ್ನು ತಳೆದಿರುವುದರಿಂದ ಶಾರೀರಿಕವಾದ ಕ್ಷಿಪ್ರತಾನ್ವಿತ ಯಾನವಾದರು ದುಃಖಕಾರಿಯಲ್ಲ.

ಜೀವನಾಪ್ರಕಾರಗಳಿಂದ ಮಾತ್ರವೇ ದೋಷಗಳು, ನಿಜವಾದ ದುರಂತಗಳು
ವ್ಯಕ್ತಿತ್ವಕ್ಕೆ ತಟ್ಟುತ್ತವೆ. ಮಧುರತೆಯೇ ಮೈವೆತ್ತ ಹೂಸಸಿಯೊಂದರ ಮೇಲೆ
ಜಲಪಾತ ವೇಗದಲ್ಲಿ ನೀರನ್ನು ಧಾರಾಕಾರವಾಗಿ ಸುರಿದಂತಾಗಿದೆ ಮಾನವ
ನಿಂದಿನ ಆಂತರಿಕ ಕಾಯದ ಪರಿಸ್ಥಿತಿ. ೧೪) ಮನುಷ್ಯಪಥದ ಮೂಲಭೂತ
ಕರ್ತವ್ಯಗಳ ಕಡೆಗೆ ಕನಿಷ್ಠ ಪ್ರಮಾಣದಲ್ಲಾದರು ಶ್ರದ್ಧೆಯನ್ನು ಬೆಳೆಸುವಲ್ಲಿ
ಇಂದಿನೆಲ್ಲ ಪ್ರಸಾರಮಾಧ್ಯಮಗಳು ವೈಫಲ್ಯ ತಾಳಿರುವುದನ್ನು ಕಾಣುತ್ತೇವೆ.
ಅವುಗಳ ವಿಜೃಂಭಣೆ ಹೆಚ್ಚಿದಂತೆ ಹಾಗಿರುವ ಗುಣಗಳೆಲ್ಲ ಬೀದಿಪಾಲಾಗಿವೆ.
ಅತ್ಯಲ್ಪ ಬಾಳಿಕೆಯ ಸುಖ, ಸೌಕರ್ಯಗಳ ಕಡೆಗಷ್ಟೇ ಸತತವಾಗಿ ಆಸಕ್ತಿಯ
ನ್ನವು ಪೆಚ್ಚಿಸಿರುವುದು. ಒಂದು ದಿನ ಭೌತಿಕ ಸುಖವೂ ಸಾಯುತ್ತದೆ.
ಅದನ್ನು ಪಡೆಯುವ ಶಕ್ತಿಯೂ ನಷ್ಟವಾಗುತ್ತದೆ. ಮತ್ತೆಲ್ಲಿ ಸುಖ ? ವಿಚಾರ
ಗಳೊಂದಿಗಿನ ಸುಖ ಮಾತ್ರವೇ ಅವಿನಾಶಿಯಾದುದೆಂಬುದನ್ನು ಮಾನವನಿಂದು
ಮರೆತಿದ್ದಾನೆ. ತುಸುವಧಿಕ ಸೇವಿಸಿದರು ಮಹತ್ತರ ಪರಿತಾಪವೀಯುವ, ಸತತ
ವಾಗಿ ದುಃಖಕ್ಕೇನೇ ನಡೆಸುವ ಕ್ಷಣಿಕಸುಖಗಳನ್ನೇ ತನ್ನ ಸಹಚರರಾಗಿ ಗೈದಿ
ದ್ದಾನೆ. ಬಾಳ್ವೆಯಿಂದ ಪ್ರತ್ಯೇಕವಾಗಿ ದೂರಾಳಗಳಲ್ಲಿ ಹುದುಗಿರುವಂಥ ಪರ
ಮಾತ್ಮನೊಂದಿಗೆ ಸಂಪರ್ಕಿಸಬಲ್ಲ ಹೃದಯವಾಣಿ, ಪ್ರಕೃತಿಯ ಗೂಢಸತ್ಯಗಳ
ನ್ನು ವ್ಯಕ್ತಗೊಳಿಸಬಲ್ಲ ಆಂತರಿಕ ದೂರದರ್ಶನ, ಪರಮಾಮುದವನ್ನು ನೀಡಬಲ್ಲ
ಭಾವ, ವಿಚಾರಗಳ ಚಲನವೃಂದ ತನ್ನೊಳಗೇನೇ ಸುಪ್ತವಾಗಿರುವಾಗ ಅವನ್ನು
ನಿರ್ಲಕ್ಷಿಸಿ ಬಾಹ್ಯ ಸಾಧನಗಳನ್ನು ಹಿಂಬಾಲಿಸಿದ್ದಾನೆ. ಧರೆಯ ವಿಭುವಿನ
ಜತೆಲಿ ಮಾತಾಡಿರಲು ಮಾನಸ ದೂರವಾಣಿಯು | ಪರಿಪರಿಯ ಘನತತ್ತ್ವ
ತೋರಿರೆ ಬುದ್ಧಿ ದರ್ಶನವು | ಮುರುಟದಿಹ ಚಿನ್ಮೋದ ಸಲಿಸುವ | ನಿರುತ
ಭಾವ ವಿಚಾರ ಜತೆಗಿರೆ | ಜೊರದ ಪರಿಕರ ಕಿಂಕರಾದುದೆ ಬಾಳ ಮುನ್ನಡೆ
ಯೇ ? ಎಲ್ಲೆಲ್ಲಿನದೊ ನೋಟವಿರುವಲ್ಲಿ ನೋಡಲಿಕೆ | ಯೆಲ್ಲೆಲ್ಲೊ ಯಾರಾ
ರೊ ಮಾತಾಡಿಸಿದ ದನಿಯನ್ನು | ಬಲ್ಲೆ ನೀ ಕುಳಿತಲ್ಲೆ ಸವಿಯಲೀ ದಿನ ದಿಟವು
ಘನಸಿದ್ಧಿ ನೆನೆಯುತಿವನೆ | ಸೊಲ್ಲದುದಾಗಾಗ ಮತಿಲಿ ಮೂಡಿತನಿರುತ |
ಗುಲ್ಲಳಿಸಿಯಾನಂದ ನಿಲಯಕೊಯ್ಯುವ ಗುರುವ | ನೆಲ್ಲ ಭಾಗ್ಯವ ಬದುಕಿಗೊದ
ಗಿಸಿದ ದಣಿ ದನಿಯು ಕುರುಹಿಣುಕವಾದೆಯಲ್ಲೋ || ಸಾಮಾನ್ಯವಾಗಿ ಇಂದಿನ
ವ್ಯಕ್ತಿಗಳೊಂದಿಗೆ ಮಾತಾಡಿದರೆ ಅವರು ತಮ್ಮ ಸಹಜತೆಯನ್ನು, ಮೂಲ

ಪ್ರವೃತ್ತಿಗಳನ್ನು, ಸ್ವಾಭಾವಿಕ ಸಿಂಪ್ರಗಳನ್ನು, ಆಂತರಿಕ ವ್ಯಕ್ತಿತ್ವವನ್ನು ಕಳೆದುಕೊಂಡು ಬಹಳಷ್ಟು ಸಮಯವಾಗಿದೆಯೆಂಬುದು ವಿದಿತವಾಗುತ್ತದೆ. ಯಾವಾವುವೋ ಪ್ರಾಪಂಚಿಕ ಪ್ರಭಾವಗಳಲ್ಲಿ ಸಿಲುಕಿರುವ ಸಂಕೀರ್ಣಶೀಲರಾಗಿ ನಮಗವರು ಗೋಚರಿಸುತ್ತಾರೆ. ಒಂದೆ ಮಂದಿರದೊಳಗೆ ಬಲುಹಸಿವೆಯಿಂ ದೊಬ್ಬ । ಕುಂದಿ ತಪಿಸುತ ದಣಿದು ತೊಳಲಾಡುತಿದ್ದಿರಲು । ಹೊಂದದವನೆಡೆ ಗಿನಿತು ಲಕ್ಷ್ಯವನು ಭಾಗಾನ್ಯದಲಿ ಸೋದರಾನ್ಯ ತಾನು । ತಿಂದು ಸವಿತೀನಿಗಳ ಡರ್ರೆಂದು ತೇಗುತಲಿ । ಸಂದು ನಾನಾ ವಿಲಸದುತ್ಸವಕೆ ಕಾಡ್ಮಿಗಗ । ಳಂದದಲಿ ಬಲು ಭೋಗ ರತನಿಹುದೆ ಹೇಳ್ ಬಾಳ ಮುನ್ನಡೆಯೆ ಮನುಜಕುಲದ ॥ (ವಿ. ಸೂ. :– ನಮ್ಮ ಸದ್ಯದ ಸಹಕಾರಿಗಳ ಗುಂಪಿನಲ್ಲಿ ಇಬ್ಬರು ದೂರದರ್ಶನ ಹೊಂದಿರುವವರು ಸಹ ಸೇರಿರುವುದರಿಂದ ಕ್ರಮಗೀ ಮಾತುಗಳನ್ನು ವೈಯುಕ್ತಿಕವಾಗಿ ಹೇಳಿದುವೆಂದು ಭಾವಿಸದಿರುವಂತೆ ಪ್ರಾರ್ಥನೆ) ಹೊರದನಿ ಗದ್ದಲದಲಿ ಯೊಳದನಿಗಳ । ಕರೆಗಿನಿತಾದರು ಗಮನವ ಸಲಿಸದೆ । ಹೊರನೋಟಾವಳಿ ಸಂಭ್ರಮದೊಳಗೆದೆ ದರ್ಶನ ಲಕ್ಷಿಸದೆ । ಮರೆಯುತ ಹುದುಗಿರುವಾತ್ಮನ ಮಧ್ಯ ರತಿ । ಧನೆಲಾಲಿತ್ಯದ ಮಿಲನಾಶಿಸುತಲಿ । ಪರಿಪರಿ ಶೋಕವಿ ಕಡೆವುದು ನಾಗರಿಕತೆಯೇನಿದೆ ನರನ ॥ ೧೫) ಸತ್ಸಹಕಾರವನ್ನು ತಗ್ಗಿಸಲು, ತಡೆಯಲು ಬೇಕಾದರು ಪ್ರಸಾರಮಾಧ್ಯಮಗಳ ಬಳಕೆಯಾಗುತ್ತದೆ. ಆದರೆ ದುಷ್ಕೃಟಗಳ ಬಗ್ಗೆ, ದುಷ್ಟ ಹವ್ಯಾಸಗಳಿಗೆ ಧಾರಾಳನಾಗಿ ಸಹಕಾರ ಹೆಚ್ಚಿಸಲಾಗುತ್ತದೆ. ಅವುಗಳಿಗೆ ಯಾವುದೇ ಪರಿಮಿತಿಯನ್ನು ಯೋಜಿಸಲಾಗುವುದಿಲ್ಲ. ಬೀದಿಯ ಸಮೀಪ ಅತ್ಯಲ್ಪ ದೂರದಲ್ಲಿ ದೊಡ್ಡ ವಸತಿಗೃಹವೊಂದರಲ್ಲಿ ದಿನಂಪ್ರತಿ ಜರಗುತ್ತಿರುವ ಮನುಷ್ಯತ್ವದ ವಧೆಯ ಕುರಿತು ರಕ್ಷಕಸ್ಥಾನಕ್ಕೆ ಯಾವನಿಂದಲೂ ಸುಳಿವು ದೊರಕುವುದಿಲ್ಲ. ಇವನ್ನೆಲ್ಲ ಲಕ್ಷಿಸಿದರೆ ಪ್ರಸಾರಮಾಧ್ಯಮಗಳ ಪ್ರಾಪ್ತಿಯಿಂದ ಜನರೆಲ್ಲ ಮಾಣಿಕ್ಯ ಕೈಗೊದಗಿದ ವಾನರಗಳಿಗಿಂತ ಮಿಗಿಲಾಗಿ ಚೇಷ್ಟೆಗಳ ವಿಸ್ತೃತಿಯ ಹೊರತು ಮತ್ತಾವುದೇ ಪ್ರಯೋಜನ ಪಡೆಯುತ್ತಿಲ್ಲವೆಂದು ನಿರ್ಣಯಿಸಬಹುದಾಗಿದೆ. ಪರಿಸರ ಪ್ರಭಾವಗಳ ಮಧ್ಯೆ ತಮ್ಮ ತಲೆ, ಕಣ್ಣು, ಕಿವಿ, ಪುಪ್ಪುಸ, ಮಾನಾಂಗಗಳನ್ನು ಕೆಡಿಸುವ, ಸಾಮರ್ಥ್ಯಗಳನ್ನು ಕುಂದಿಸುವ ವಸ್ತುಗಳೆಡೆಗೆ ಪರಮಾವಧಿ ಪ್ರೋತ್ಸಾಹ ಸಲ್ಲಿಸುತ್ತಿರುವುದೇ ಶಿಕ್ಷಿತರನ್ನೊಡಗೂಡಿಕೊಂಡು ಸದ್ಯ ಆಧುನಿಕರ ಆಗಿನ ಹವ್ಯಾಸವಲ್ಲ, ಸಂತತವಾದ ಅಭ್ಯಾಸ

ಪೆನಿಸಿದೆ. ಹಿತಸಂಬಂಧಿತ ಭಾವನೆ ತುಳಿಯುತ | ಮತಿಗೇನಾದರು ಬೇಸರಿಸಲು ಸಂ|ಗತಿಗತಿ ದುಃಖದ ತರಲದ ಹಿಡಿದನುಬ್ಬುಗ ಶೀಘ್ರದಲೀ| ಕ್ಷಿತಿಯೊಳು ವಿಜೃಂಭಿಸಲು ನೆರವೀವರು | ಜತೆಸೇಯಲು ಯುಕ ಬೇಡಿಕೆ ತಾಪದ | ಹತಿಗೀಡಾಗಿಸುತಿರುವರು ನರನಿದೆ ನಾಗರಿಕತೆಯೇನ್ಸೈ || ೧೬ ಕ್ರಮಪ್ರತಿಫಲಗಳಲ್ಲಿ ಅಧಿಕವಾಗಿ ಅಸಮಾನತೆ ವಿಸ್ತರಿಸುತ್ತಿರುವುದೇ ಸಮಾಜದಲ್ಲಿ ವಿವಿಧ ದುಃಖಗಳಿಂದು ನೆರೆಯಲು ಕಾರಣವಾಗುತ್ತಿವೆ. ಅಧಿಕವಾಗಿ ಮಾಸಿತವಾಗುತ್ತಿರುವವರು ವಿಲಾಸಾಮುದಗಳಲ್ಲಿ ನಿರತರಿರುವುದನ್ನು ಕಂಡು ಬಹುಕಡಿಮೆ ವರಮಾನದವರಿಗೆ ಸಹ ಅಂಥವುಗಳಲ್ಲಿ ಮಿಗಿಲಾದ ಆಸಕ್ತಿಗಳು ಜನಿಸುತ್ತವೆ. ಸಹಜವಾಗಿಯುವನ್ನು ತಣಿಸಿಕೊಳ್ಳಲು ಸಾಧ್ಯವಿರದ ಸನ್ನಿವೇಶಗಳಲ್ಲಿ ಯಾವುದೇ ಕ್ಷೇತ್ರದವರಾದವರು ಅನ್ಯವಹಾರ, ಭ್ರಷ್ಟಾಚರಣೆಗಳನ್ನು ಕೈಗೊಳ್ಳುತ್ತಾರೆ. ಸೃಷ್ಟಿ ವಿರೋಧಿಸ ನಡೆಯಿರೆ ಮಿಕ್ಕಿದೆ | ನಷ್ಟದನೆಸಗುತ ಸಮತಾದಂಗದಿ | ಪ್ರಸ್ಥವನಾಗಿಹಿ ಮಡುಸಾಗರದೊಲು ಭೇದಾವಿಂತಗಳನು | ದೃಷ್ಟಿಲಿ ನೋಡದರನಿಲು ತಿಳಿವಿಂಸದೆ | ಮುಷ್ಟಿಲಿ ಮಡಿದಿರೆ ಹಲರುಮವಾಸದ | ದುಷ್ಟರು ವಿಲಸೇರಿರುವುದು ಪೇಳು ನಾಗರಿಕತೆಯೇ ನರನ || ೧೭ ವಿವಿಧ ವ್ಯವಹಾರಗಳಲ್ಲಿ ಮನಸ್ಸು ಸಾಧನಾತ್ಮವಾಗಿ ತಪ್ಪುಮಾರ್ಗ್ಯವುದಕ್ಕೇ ಸುತ್ತುತ್ತಿರುತ್ತದೆ. ಗ್ರಾಹಕರೊಂದಿಗೆ ಸಂಭಾಷಣೆಗಳು, ಕಛೇರಿಗಳಲ್ಲಿ ನಡೆವುದ್ಯೋಗಗಳು, ಬರಹದ ಕಾರ್ಯಗಳೆಲ್ಲ ಅದರ ಮೂಲಕವೇ ಜರಗುತ್ತಿರುತ್ತವೆ. ಹೀಗಾಗಿ ಅಂತರಂಗಕ್ಕೆ ಸಾಧಾರಣವಾಗಿ ನುಡಿಗಳ ಬಗೆಗೊಂದು ದಣಿವೇ ಮೈಗೂಡಿರುತ್ತದೆ. ಇಂಥ ಸ್ಥಿತಿಗಳಲ್ಲಿ ಚಿತ್ರ, ಗಾನವೇ ಮೊದಲಾದಂಥವು ವ್ಯಕ್ತಿಗಳಿಗೆ ಅತ್ಯಂತ ಪ್ರಿಯವೆನ್ನಿಸುತ್ತವೆ. ದೃಶ್ಯಯುಕ್ತವಾದ ಪತ್ರಿಕಾದಿಗಳು ಜನಪ್ರಿಯತೆಯನ್ನು ಹೆಚ್ಚಿಸಿಕೊಳ್ಳುತ್ತವೆ. ಆದರೆ ವ್ಯಾಪ್ತಸಮಾಸ್ಯವುದ ಮೂಲಕ ದುರ್ವಿಷಯಗಳನ್ನು, ಜಡಿಮು ಸದ್ವಿಚಾರಗಳ ಪ್ರವೇಶಕ್ಕೆ ಸಹ ಅವಕಾಶವಿರದಂತೆ ಗೈದ ಪ್ರಭಾವಗಳೇ ಇಲ್ಲಾದವು ಕ್ರಿಯಾನ್ವಿತವಾಗಿ ವಿವಿಧ ಬಣ್ಣಗಳ ಬೆಡಗು, ಕ್ಷಣಿಕ ಸುಖಗಳ ಥಳಕು ಮುಂತಾದವುಗಳಿಂದ ಪ್ರದರ್ಶನೆಗಳನ್ನು ವಿಸ್ತರಿಸುತ್ತವೆ. ಸರಳತೆಯನ್ನುಳಿದು ಕಣ್ಣುಗಳಿಗಿವು ಹಾನಿಕಾರಕಗಳಾಗುತ್ತವೆ. ಅಧಿಕತೆ, ಅನಗತ್ಯತೆ, ಅಸಮರ್ಪಕತೆ, ಅಗುಣಾನ್ವಿತತೆ ಇತ್ಯಾದಿಗಳೊಂದಿಗೆ ಚಲಚ್ಚಿತ್ರಾದಿಗಳಲ್ಲಿನ ವೇಗ ಮನುಷ್ಯನ ಬುದ್ಧಿ, ವಿವೇಕಗಳಿಗೇನೇ ಅಪಾಯಕಾರಿಯಾಗಿ

ಪರಿಣಮಿಸುತ್ತದೆ. ಹೊರಗಿನ ದೂರದರ್ಶನ ಆಂತರಂಗಿಕ ತಳದರ್ಶನವನ್ನು ಕುಂದಿಸುತ್ತದೆ. ಭೌತಿಕ ದೂರವಾಣಿ ಮಾನಸಿಕ ಮೂಲವಾಣಿಯನ್ನು ಕಂದಿಸುತ್ತದೆ. ಪ್ರಾಸಂಗಿಕ ಧ್ವನಿಗ್ರಾಹಿ ಹೃದಯದ ಧ್ವನಿಗ್ರಾಹಿಯನ್ನು ಮುದುಡಿಸುತ್ತದೆ. ಬಾಹ್ಯಮಧುರತೆಯ ಸಹಚರ್ಯ ಮತಿಸುಪ್ತಪಿರುವ ಲಾಲಿತ್ಯವನ್ನು ಮುರುಟಿಸುತ್ತಡೆ. ಜಗತ್ತಿನ ಬೆಳಕಿನ ತೀಕ್ಷ್ಣತೆ, ನವನಾಗರಿಕತೆಯ ಘನತೆ ಚಿತ್ತವ್ಯಾಪಕವಾದ ತೇಜಸ್ಸನ್ನು ಕಳೆಗೆಡಿಸುತ್ತದೆ. ದ್ರವರಹಿತವಾಗಿ ಗಟ್ಟಿಯಾಹಾರಗಳನ್ನು ಸೇವಿಸಿದಾಗ ಬಾಯಾರಿಕೆ ಹೆಚ್ಚುವ ತೆರದಲ್ಲಿ ದುರಾಕರ್ಷಣೆಗಳ ಉತ್ತೇಜನದಿಂದ ಅಧಿಕಾಧಿಕವಾಗಿ ದುರ್ವಿಷಯಗಳ ಸಂಗ ಗೈದಷ್ಟು ನೀಚ ಪ್ರವೃತ್ತಿಗಳೇ ಮಿತಿರಹಿತವಾಗಿ ಬೀಗಿಕೊಂಡು ವಿವಿಧ ವಿಲಾಸಗಳಲ್ಲಿ ಲಭ್ಯವಾಗುವ ದುರ್ಭಾವದ್ರವಗಳನ್ನು ಪರಿಗ್ರಹಿಸಲು ವಿಪರೀತವಾಗಿ ತಹತಹಿಸುತ್ತವೆ. ಸಾವಿರ ಸಹಜರು ತಿನುವಾಹಾರದಿ । ಹೇವವಿಲ್ಲದೆ ಬೆರೆಸುತ ವಿಷಗಳ । ಸಾವಿಗೆ ಬಲಿಯಾಗಿಸುವುದು ಹಿನ್ನೆಲೆಯಿಂದಲಿ ಶೋಷಿಸೆ ಸಿರಿಯಧಿಕ । ಪಾವನ ಶೀಲವ ತೊರೆಯುತ ಚಣಸೊಗ । ಸೇವಿಸೆ ಸಲು ಮನ; ದೇಹಾನ್ಯಾಟಿಕೆ । ಗೈವುದು ಸ್ವೈಚ್ಛ್ಯದ ರಕ್ತಿಲಿ ನಾಗರಿಕತೆಯೇ ಹೇಳ್ನನರನ ‖ ೧೪ ವಿಲಾಸಗಳ ಮೆರವಣಿಗೆಗಾಗಿ ಬಳಕೆಯಾಗುವುದನ್ನು ತಡೆಗಟ್ಟಿ ಪ್ರಸಾರ ಮಾಧ್ಯಮಗಳನ್ನು ಮುಂದಿನ ಉದ್ದೇಶಗಳಿಗಾಗಿ ವಿನಿಯೋಗಿಸಿದಾಗ ಮಾತ್ರವೇ ಸುಂದರವಾದೊಂದು ಸಮಾಜದ ನಿರ್ಮಾಣ ಸಾಧ್ಯವಿದೆ. ೮ ಜನರಲ್ಲಿ ನಿಜವಾದ ಸ್ವಚ್ಛತೆಯ ಪ್ರಜ್ಞೆಯನ್ನು ಬೇರೂರಿಸುವುದು. ೮ ಸಾಮೂಹಿಕ ಸ್ಥಾನಗಳನ್ನು ಶುಚಿಯಾಗಿರಿಸುವ ಹೊಣೆಯೆಡೆಗೆ ಸತತವಾಗಿ ಲಕ್ಷ್ಯವನ್ನು ನೆಲೆಗೊಳಿಸುವುದು. ೯ ಸಮಾಜ, ಸಂಸ್ಕೃತಿಗಳ ಕಡೆಗೆ ಶ್ರದ್ಧೆಯನ್ನು ಬೆಳೆಸುವುದು. ೯ ದೇಶದಲ್ಲಿ ತಾಂಡವವಾಡುತ್ತಿರುವ ಬಡತನದ ಸಂಕಷ್ಟಗಳ ಕುರಿತು ಮನದಟ್ಟಾಗಿಸಿ ಅವನ್ನು ತೊಲಗಿಸುವಲ್ಲಿ ತಾವು ವಹಿಸಬೇಕಿರುವ ಪಾತ್ರಗಳನ್ನು ವಿದಿತಗೊಳಿಸುವುದು. ೮ ಪ್ರಜೆಗಳಲ್ಲಿ ಸಹೋದರ ಭಾವವನ್ನು ಕೊನರಿಸುವುದು. ೮ ರಾಷ್ಟ್ರ ಸಾರ್ವತ್ರಿಕವಾಗಿ ಸಂಪನ್ನವಾದಾಗ ಮಾತ್ರವೇ ತಾವು ನೈಜವಾದ ಮೇಲ್ಮೆಯನ್ನು ಪಡೆದಂತಾಗುವುದೆಂಬ ಸತ್ಯವನ್ನು ಮತಿಗಳಿಗೆ ನಾಟಿಸುವುದು. ೮ ಪ್ರತಿಫಲಾಧಿಕ್ಯವನ್ನೇ ಗುರಿಯಾಗಿರಿಸಿಕೊಂಡ ಸ್ವಾರ್ಥ

ಪೂರಿತ ಪಥದಿಂದ ವಿಮುಖಿಗೈದು ನ್ಯಾಯ, ಧರ್ಮ, ದಯೆ, ಸಹಾನುಭೂತಿ ಮುಂತಾದವುಗಳೊಂದಿಗೆ ಕಳಿಸುವುದು. ಶಿವರಾತ್ರಿಯ ದಿನ ವಿಶೇಷ ನೃತ್ಯದ ಬದಲು ಭಾರತೀಯರು ಪುಣ್ಯಪೂರಿತವೆಂದು ಬಗೆಯುತ್ತಿರುವ ರಾತ್ರಿಯನ್ನು ಯಾವಾವ ರೀತಿ ಅಶಿವರಾತ್ರಿಯಾಗಿ ಮಾರ್ಪಡಿಸಿದ್ದಾರೆಂಬುದನ್ನು ದೂರದರ್ಶನ ತೋರಿ ಸಮಾಜ, ದೇಶಗಳ ಬಗೆಗೆ ಆದರ ಮೈದಾಳಿಸುವ ಪ್ರಸಂಗಗಳನ್ನು ಚಿತ್ರೀಕರಿಸಿದ್ದರೆ ಲೇಸಿದ್ದಿತೆಂಬುದು ಖಚಿತ. ಬೇರೆ ಕ್ಷೇತ್ರಗಳ ಹೊಣೆಗಾರಿಕೆಗಳನ್ನು ಸಹ ಇದೇ ರೀತಿ ಮಂಡಿಸಬಹುದಾಗಿದೆ. ತೀವ್ರ ವಿನಾಶದಿಂದ ಹಿಂದುಳಿಯಬೇಕಾದರೆ ವಿಶ್ವಮಾನವ ಕಥೆ, ಕಾದಂಬರಿ, ವಿಲಾಸ ಮುಂತಾದವುಗಳಿಗೆ ಈ ವರೆಗೆ ಸಲ್ಲಿಸಿದ ಪ್ರಾಶಸ್ತ್ಯವನ್ನು ಹಿಂದೆಗೆದುಕೊಂಡು ವಿವೇಕರಹಿತವಾದ ಪ್ರಗತ್ಯಕ್ಕೆ ತಾನು ಕುಸಿದಿರುವ ಬಗ್ಗೆ ವಿಷಾದ ಪಟ್ಟು, ಸಮರ್ಪಕವಾದ ಸಾಮಾಜಿಕ ಶಿಕ್ಷಣಕ್ಕೆ ಯೋಗ್ಯ ಸ್ಥಾನಗಳನ್ನು ಎಲ್ಲೆಡೆಗಳಲ್ಲಿ ಕೂಡಲೇ ತೆರವಾಗಿಸಬೇಕಾಗಿದೆ. ಅರ್ಹ ಸತ್ಕಾರದಿಂದವನ್ನು ಮೌಲ್ಯವತ್ತಾಗಿಸಬೇಕಾಗಿದೆ. ಅಸುರ ಘಟೋತ್ಕಚ ಮಾಯಾಮಂದಿರ | ಪೆಸಗಿದ ತೆರದಲಿ ಮನಕತಿಯದ್ಭುತ | ಜನವಿಮುವೆನಿಸಲು ವಿಧವಿಧ ಯಾಂತ್ರಿಕ ಪರಿಕರಗಳ ರಚಿಸಿ | ಕುಸಿಯುತ್ತೆಮಿಗೆ ಸೆರೆಯಾಗುತ ತಾನೇ | ರಸೆಯಲಿ ಹಬ್ಬಿಸಿದಂತಹ ಮಿಥ್ಯೆಲಿ | ದೆಸೆಗೆಡುತತಿ ತಪಿಸಿರುವುದೆ ನಾಗರಿಕತೆಯಾಯಿತೆ ನರನ ||

೧೯) ಜಗತ್ತಿಗೆ ಹೆಚ್ಚೆಚ್ಚು ಹಾನಿಯುಂಟಾಗಿಸಿದಷ್ಟು, ಜನರ ತನುಮನಗಳನ್ನು ಅಧಿಕಾಧಿಕವಾಗಿ ಕೆಡಿಸಿದಷ್ಟು ವ್ಯಕ್ತಿಗಳ ಸುಖ, ಸೌಕರ್ಯಗಳಿಂದು ಹೆಚ್ಚಾಗುತ್ತಿರುವುದನ್ನು ಕಾಣುತ್ತೇವೆ. ಜನರು ಅಭ್ಯುದಯದ ಬದಲು ವಿನಾಶದೆಡೆಗೇ ಸರಿಯುತ್ತಿರುವುದನ್ನು ಇದೊಂದು ಸಮರ್ಥಿಸುವ ಸಂಗತಿಯಾಗಿದೆ. ೨೦) ಹೊಳಿಲಕುಮಿಪುರದ ಕೇಂದ್ರ ಮಾರುಕಟ್ಟೆಯಬಳಿ ಉಪಹಾರ ಗೃಹವೊಂದಕ್ಕೆ ಹೋಗಿ ಕುಳಿತುದಾದರೆ ಹೊಳಿ, ಹೊಲೆಗಳ ನಡುವಿನ ಭೇದವೇ ಸರಿದಿರುವುದೆನ್ನಿಸುತ್ತದೆ. ಳಕಾರ ಬಹು ಸುಲಭವಾಗಿ ಲಕಾರಕ್ಕೆ ಬದಲೀತೆಂಬುದು ವಿದಿತವಾಗುತ್ತದೆ. ಹೊಳಿಯ ಬಳಿ ಹೋಗುವುದಕ್ಕೂ, ಹೊಲೆಯನ್ನು ಸಾರುವುದಕ್ಕೂ ಯಾವುದೇ ವ್ಯತ್ಯಾಸವಿರದಂತಾಗಿದೆ. ಇದರ ವಿರುದ್ಧ ವಾಕ್ಯ ಮಾತ್ರ ಸತ್ಯವಾಗಿರದು. ಕಾರಣ ಹೊಲೆಯನಲ್ಲಿ ಬೇರೆಯವರ ಮಾಲಿನ್ಯಗಳನ್ನು ತೊಳೆಯುವ ಗುಣವಿರಲಾರದು. ಇವೆಲ್ಲ ಜನರಲ್ಲಿ ತಾವೇ ಪ್ರಭು

ಗಳಿರುವುವೆಂಬ ಮದವನ್ನು ಮಾತ್ರ ನಾಟಿಸಿಮುದಷ್ಟಲ್ಲದೆ ಸಮರ್ಪಕ ಸಾಮಾಜಿಕ ಶಿಕ್ಷಣವನ್ನು ನೀಡದಿರುವುದರ ಪ್ರತಿಫಲಗಳು. ಪ್ರಸಾರಮಾಧ್ಯಮಗಳು ಸರಿಯಾಗಿ ಕೆಲಸ ಗೈದುದಾದರೆ ಪ್ರಜೆಗಳು ಎಂಥ ಮಾಲಿನ್ಯಯುಕ್ತವಾದ ಬೀಡುಗಳನ್ನು ಸಹ ಶೀಘ್ರವಾಗಿ ಮೋಳಿಯುವ, ತೇಜೋಸಂಪನ್ನವಾದ ನೆಲೆಗಳಾಗಿ ಬದಲಾಯಿಸಬಲ್ಲರು. ೨೧ ಮುಂದಾದರು ಸುಖಮಯವಾದ ಸಮಾಜವೊಂದು ಸ್ವೈಜಾಸ್ತಿತ್ವವನ್ನು ತಳೆದಿರುವುದನ್ನು ಕಾಣುವಂತಾಗಬೇಕಾದರೆ ಶಿಕ್ಷಣ ಕಾಲದಲ್ಲೇ ತರುಣರಿಗೆ ಮುಂದೆ ಸೂಚಿತವಾದ ದೀಕ್ಷೆಗಳನ್ನು ಸಲ್ಲಿಸುವುದು ಅನಿವಾರ್ಯವೆನ್ನಿಸುತ್ತದೆ. ಅ ಗುರುಗಳಲ್ಲಿ, ಹಿರಿಯರಲ್ಲಿ ನಿಜವಾದ ಭಕ್ತಿಯನ್ನು ಧರಿಸುತ್ತೇವೆ. ಆ ಒಳ್ಳೆಯ ತಿಳುವಳಿಕೆಗಳ ಕುರಿತು ನಿಷ್ಠೆಯನ್ನು ತಾಳುತ್ತೇವೆ. ಇ ಯಾವುದೇ ಕೆಟ್ಟ ರೀತಿಯ ತಿಳುವಳಿಕೆಗಳು ಭೌತಿಕವಾಗಿ ಹೆಚ್ಚಿನ ಪ್ರಯೋಜನಗಳನ್ನು ನೀಡುವುದಾದರು ಆ ತೆರದರಿವುಗಳನ್ನಾಗಲೀ, ಪ್ರಯೋಜನಗಳನ್ನಾಗಲೀ ನಾವು ಪಡೆದುಕೊಳ್ಳಬಯಸುವುದಿಲ್ಲ. ಈ ಒಳ್ಳೆಯ ತಿಳುವಳಿಕೆಗಳೇ ನೀಚಪಥಗಳಲ್ಲಿ ಬಳಕೆಯಾದಾಗ ಅಧಿಕ ಲಾಭಗಳನ್ನು ತಂದೀಯುವುದಾದರು ಅಂಥವನ್ನು ನಾವು ಸ್ವೀಕರಿಸುವವರಾಗುವುದಿಲ್ಲ. ಉ ಗುರುಗಳಾಗಲಿ, ಹಿರಿಯರಾಗಲೀ ಶರೀರ ಹಾಗು ಮನಸ್ಸುಗಳಿಗೆ ಘಾತಕರವಾಗಿರುವಂಥ ವಸ್ತುಗಳಲ್ಲಿ, ವಿಷಯಗಳಲ್ಲಿ ರಕ್ತಿಯನ್ನು ತಳೆದಿರುವರಾದರೆ ಅದನ್ನು ತಪ್ಪುಮಾದರಿಯೆಂದು ತಿಳಿಯುತ್ತೇವೆ ಮತ್ತು ನಾವೆಂದೂ ಹಾಗೆಸಗುವುದಿಲ್ಲವೆಂಬ ಪಣ ಧರಿಸುತ್ತೇವೆ. ಊ ಲೋಕಗಳಿಗೆಲ್ಲ ನಿರಂತರವಾಗಿಯೊಬ್ಬ ಯಜಮಾನನಿರುವನೆಂಬುದನ್ನು ಹೃದಯಾಳದಲ್ಲಿ ಬಲವಾಗಿ ನಚ್ಚುತ್ತೇವೆ ಮತ್ತು ಯಾವುದೇ ಸನ್ನಾಮ, ಸದ್ರೂಪದಿಂದವನನ್ನು ಗುರುತಿಸಲು ಸಾಧ್ಯವೆಂದು ಗ್ರಹಿಸುತ್ತೇವೆ. ಋ ಭಗವಂತ ಆತ್ಮರೂಪದಲ್ಲಿ ಹೃದಯಸಿಂಹಾಸನದಲ್ಲಿ ಕುಳಿತು ನಮ್ಮೆಲ್ಲ ಭಾವಗಳನ್ನು, ವಿಚಾರ, ಕಾರ್ಯಗಳನ್ನು ವೀಕ್ಷಿಸುತ್ತಿದ್ದಾನೆಂಬ ಸತ್ಯವನ್ನು ಸದಾ ಚಿತ್ತದಲ್ಲಿ ನೆಲೆಗೊಳಿಸುತ್ತೇವೆ. ೠ ಪರಮಾತ್ಮ ಸರ್ವವನ್ನೂ ನೋಡುತ್ತಿರುವನಾಗಿ ಶಾರೀರಿಕವಾಗಲೀ, ಮಾನಸಿಕವಾಗಲೀ ಬೇರೆ ಮನುಷ್ಯನಿಗೆ, ಜೀವಿಗೆ ಅನ್ಯಾಯ ಗೈಯುವುದು, ನೋವುಂಟಾಗಿಸುವುದು ದುಃಖಕ್ಕೆ ದಾರಿಯಾಗುವುದೆಂಬುದನ್ನು ಯಾವತ್ತು ಸಹ ಮರೆತು ನಾವು ವರ್ತಿಸುವುದಿಲ್ಲ. ಧರ್ಮ, ಭಾಷೆ, ಸಮಾಜಗಳು ನಮಗಿಂತ ದೊಡ್ಡವೆಂಬುವ

ನ್ನರಿದು ಅವುಗಳ ಸೇವೆಗಳಿಗೆ ಸದಾ ಮಾನ್ಯತೆಯೀಯುತ್ತೇವೆ. ಏ ಜಾತಿ, ಮತ, ಪಂಥಗಳ ವ್ಯತ್ಯಾಸಗಳನ್ನು ಮಾನವರ ಮಧ್ಯೆ ಜೀವನಾನುಕೂಲಗಳಿಗೆ ಸಂಬಂಧಿಸಿದ ಭೇದಗಳನ್ನು ಹೆಚ್ಚಿಸಲು ಸಾಧನಗಳಾಗಿ ಗೈಯುವುದಿಲ್ಲ. ಐ ಭಾಷೆಗಳೆಲ್ಲ ತಿಳುವಳಿಕೆಗಳ ಪ್ರಾಪ್ತಿಗೆ ಮಾಧ್ಯಮಗಳಾಗಿದ್ದು ಮನುಷ್ಯರ ನಡುವೆ ಸಂಕೀರ್ಣ ವೈರವನ್ನು ಕೊಬ್ಬಿಸಲು ಅವನ್ನು ಮೂಲಗಳಾಗಿ ಪರಿವರ್ತಿಸಲಾರೆವು. ಒ ವಿವಿಧ ಕ್ರಮಗಳ ಮೂಲಕ ದೇಶಸೇವಕರು ಕಾಲಿಕ ಸ್ಥಿತಿಗಳಲ್ಲಿ ಸಾರ್ವತ್ರಿಕವಾಗಿ ಪಡೆದುಕೊಳ್ಳುತ್ತಿರುವ ಮಟ್ಟಕ್ಕಿಂತ ಹೆಚ್ಚಿನ ಪ್ರತಿಫಲವನ್ನು ಯಾವುದೇ ಕೆಲಸದಿಂದಾದರು ನಾವು ಸ್ವೀಕರಿಸಲಿಕ್ಕಿಲ್ಲ. ಹಾಗೆಸಗುವುದು ಮಹತ್ತರವಾದೊಂದು ರಾಷ್ಟ್ರದ್ರೋಹವೆಂದೇ ತಿಳಿಯುತ್ತೇವೆ ಓ ಜಗತ್ತಿನ ನಾನಾಹಾರಗಳ ಸೇವನೆಯಿಂದಲೇ ಪ್ರಾಪ್ತವಾಗುತ್ತಿರುವ, ಶಕ್ತಿಗಳನ್ನು ರೀತ್ಯಂತರಗಳಲ್ಲಿ ವಿಫಲವಾಗಿಸುವುದರಿಂದ ಅಥವಾ ತನಗಾಗಲೀ, ಸಮಾಜಕ್ಕಾಗಲೀ ಯಾವುದೇ ಪ್ರಕಾರ ಹಾನಿಯುಂಟಾಗಿಸುವ ದುರ್ವಿನಿಯೋಗಗಳಿಂದ ಸದಾಕಾಲ ಬಿಮ್ಮೆಟ್ಟಿಸುತ್ತೇವೆ. ಔ ದುಷ್ಟ ಅಥವಾ ಭ್ರಷ್ಟ ವಿಧಾನಗಳಿಂದ ವಿತ್ತವನ್ನು ಸಂಪಾದಿಸುವುದಾಗಲೀ, ದೇಶದಿಂದಲೇ ವಿವಿಧ ಪಥಗಳಲ್ಲಿ ಲಭ್ಯವಾಗಿಸಿಕೊಂಡಿರುವ ಸಿರಿಯನ್ನು ದುಷ್ಕಾರ್ಯಗಳಿಗೆ ವ್ಯಯಗೈಯುವುದಾಗಲೀ ನಮ್ಮಾತ್ಮಕ್ಕೇನೇ ಅವಮಾನವೆಸಗಿದಂತೆಂಬುದನ್ನು ಯಾವತ್ತಿಗು ಮರೆತಿರುವುದಿಲ್ಲ. ಅಂ ಇದೇ ರೀತಿಯ ದೀಕ್ಷೆಗಳನ್ನು ಪ್ರಜಾಸದಸ್ಯರಾದವು ಪಡೆದರೆ ಎಷ್ಟೋ ಹಿತಗಳುಂಟಾದಾವು. ಅ ಜಗತ್ತಿನ ಬಾಳ್ವೆಗಳಿಗೆಲ್ಲ ದಣಿಯೊಬ್ಬನಿರುವನೆಂದು ನಾವು ನಚ್ಚುತ್ತೇವೆ. ಆ ಪರಮಾತ್ಮ ಮನಸ್ಸಿನ ಪರಿಧಿಗಳನ್ನೆಲ್ಲ ಮೀರಿರುವನಾದ್ದರಿಂದ ನಾವು ಗುರುತಿಸಿರುವುದಕ್ಕಿಂತ ವಿಭಿನ್ನವಾಗಿ ಬೇರೆ ನಾಮ, ರೂಪಗಳಿಂದ ಇತರರಾತನನ್ನು ಪರಿಚಯಿಸಿಕೊಂಡರಾದರೆ ಆ ಕುರಿತು ಸಂಶಯ, ಅಸಹನೆ, ವೈರ, ತಿರಸ್ಕಾರಗಳನ್ನು ತಾಳಲಾರೆವು ಇ ನಮ್ಮ ಬಾಹ್ಯಾಂತರಂಗಿಕ ಭಾಗಗಳನ್ನೆಲ್ಲ ಭಗವಂತ ಸದಾ ಲಕ್ಷಿಸುತ್ತಿರುವನಾದ್ದರಿಂದ ಮನದಲ್ಲಿ ದುರ್ಭಾವ, ದುರ್ವಿಚಾರ, ನೀಚ ಪ್ರವೃತ್ತಿಗಳಿಗೆ ನೆಲೆಗೊಡಲಾರೆವು ಮತ್ತು ಶರೀರಕ್ಕಾಗಲಿ, ಮನಸ್ಸಿಗಾಗಲೀ, ಸುತ್ತಣ ಸಮಾಜಕ್ಕಾಗಲೀ ಹಾನಿಗಳನ್ನು ತರುವ ಎಲ್ಲ ರೀತಿಯ ನೀಚಾಭ್ಯಾಸ, ದುಷ್ಕಾರ್ಯಗಳಿಂದ ಸರ್ವದಾ ಹಿಂದುಳಿಯುವೆವು. ಈ ದೇಶವೊಂದು

ಕುಟುಂಬ, ಮಿಕ್ಕ ಪ್ರಜೆಗಳೆಲ್ಲ ನಮ್ಮ ಸೋದರರಿದ್ದಾರೆಂದು ಬಗೆಯುವೆವು. ಋ ವಿವಿಧ ಕ್ರಮಗಳ ಮೂಲಕ ರಾಷ್ಟ್ರ ಸದಸ್ಯರು ಸಾರ್ವತ್ರಿಕವಾಗಿ ಪಡೆಯುತ್ತಿರುವ ಮಟ್ಟಕ್ಕಿಂತ ಯಾವುದೇ ಕೆಲಸದಿಂದಾದರು ಹೆಚ್ಚಿನ ಪ್ರತಿಫಲವನ್ನು ದೊರಕಿಸಿಕೊಳ್ಳುವುದನು ನಿಗತಾಂಗರಾದವರು

ವಿಶ್ವಾಸಯುಕ್ತರಿಗೆ ಕೃತಜ್ಞ



ಯಂ. ರಾಧಾಕೃಷ್ಣ ಲೇಖಕ

ಪ್ರಾಪ್ತಪಡಿಸಿಕೊಳ್ಳುವಂಥ ಸಹಾಯದಂತೆಂದು ಸಿಗ್ಗುಪಟ್ಟು ನಾವಾದಾರಿಯಿಂದ ಪ್ರತ್ಯೇಕರಾಗುತ್ತೇವೆ. ಅದೊಂದು ವೇಳೆ ಹಾಗಿರುವ ವ್ಯವಸ್ಥೆಯಲ್ಲೇ ಮುಂದರಿಯುವ ಅನಿವಾರ್ಯತೆಯಿದ್ದುದಾದರೆ ಸಹ ಹೆಚ್ಚಿನ ಮೊತ್ತವನ್ನು ಸಾಮಾಜಿಕ ಸತ್ಕಾರ್ಯಗಳಿಗೆ ವಿನಿಯೋಗಿಸುವುದರಿಂದಾದರು. ಆತ್ಮಗೌರವವನ್ನು ಸಂರಕ್ಷಿಸಿಕೊಳ್ಳುತ್ತೇವೆ. ಊ ಸತತವಾಗಿ ಪ್ರತ್ಯಕ್ಷ ಹಾಗು ಪರೋಕ್ಷ ಸಹಕಾರಗಳಿಂದ ಬಾಳ್ವೆಯ ಪಥವನ್ನು ಸುಗಮಗೊಳಿಸಿರುವ ಸಮಾಜದೆಡೆಗೆ ಹಾರ್ದಿಕ ಕೃತಜ್ಞತೆಯನ್ನು ಧರಿಸಿರುತ್ತೇವೆ. ಖು ನಮ್ಮೆಲ್ಲ ಕಾರ್ಯಗಳಿಗೆ ಹಾಗು ಕರಣಗಳಿಗೆ ನಿರಂತರವಾಗಿ ಪರಮಾತ್ಮನ ಸಾಕ್ಷೀಭೂತತ್ವವಿದ್ದು ಯಾವುದೇ ಸಂದರ್ಭದಲ್ಲಿ ನುಡಿ, ನಡೆಗಳಲ್ಲಿ ಭಿನ್ನತೆ ವ್ಯಕ್ತಗೊಳಿಸಿದರು ಆತನ ನ್ಯಾಯಾಲಯದಲ್ಲದು ಮಹಾಪರಾಧವಾಗಿ ಪರಿಗಣಿತವಾದೀತೆಂದು ಭಯ ತಾಳುತ್ತೇವೆ. ಖೂ ಪರಂಪರೆಯು ನಾನಾ ತಿಳಿವುಗಳನ್ನೊದಗಿಸಿ ದಿನವಹಿಯ ವಿಪುಲ ವ್ಯವಹಾರಗಳಲ್ಲಿ ವಿವಿಧ ಲಾಭಗಳನ್ನೀಯುತ್ತಿರುವ ಭಾಷೆಯೆಡೆಗೆ ಶ್ರದ್ಧೆಯನ್ನು ಮೈದಳೆಯುತ್ತೇವೆ. ಎ ಬಾಳ್ವೆಯ ಸುಖ, ಶಾಂತಿಗಳನ್ನು ಹಿತ ರೀತಿಯಲ್ಲಿ ಮುಂಬರಿಸಿರುವ ಧರ್ಮವನ್ನು ವಿನಯಾದರಗಳೊಡನೆ ಮಾನಿಸುತ್ತೇವೆ. ಏ ವ್ಯಾಪಕ ವ್ಯವಸ್ಥೆಯ ಮೂಲಕ ಕೋಟ್ಯಂತರ ಮಂದಿಗಳೊಡನೆ ನಮ್ಮನ್ನು ಒಗ್ಗೂಡಿಸಿರುವ ದೇಶ ಸಾರ್ವತ್ರಿಕವಾಗಿ ಸಂಪನ್ನವಾದಾಗ

ಪಾತ್ರನೇ ನಮಗೆ ನಿಜವಾದ ಮೋಕ್ಷ ದೊರಕಿದಂತಾಗುವುದೆಂದು ನಿರ್ಧರಿಸುತ್ತೇವೆ. ೨೨ ಮನುಷ್ಯತ್ವಕ್ಕೆ ವಿಶೇಷವಾದ ಹಿರಿಮೆಯನ್ನು ತಂದಿತ್ತಿರುವ ಸಂಸ್ಕೃತಿಗೆ ನಿರತವಾಗಿ ತಲೆವಾಗುತ್ತೇವೆ. ೨೩ ಆರೋಗ್ಯ, ಪುಷ್ಟಿಗಳೊಡನೆ ಕಾಯ ಬೆಳೆದಿರಬೇಕಾದರೆ ಇಪ್ಪತ್ತೊಂದು ಪ್ರಮುಖ ಪೋಷಕಾಂಶಗಳ ಅನಿವಾರ್ಯತೆಯಿರುವಂತೆ ಮುಂದಿನವನ್ನು ಮಾಸಿಸಿದಾಗ ಶೋಭಾನ್ವಿತವಾದೊಂದು ವ್ಯಕ್ತಿತ್ವದ ನಿರ್ಮಾಣವಾಗುತ್ತದೆ. ಅ ಬುದ್ಧಿಯ ಗುರುತ್ವ ಆ ಧರ್ಮದ ಪಿತೃತ್ವ ಇ ಭಾಷೆಯ ಮಹತ್ವ ಈ ವಿವೇಕದ ಯಜಮಾನತ್ವ ಉ ಸದ್ಭಾವಗಳ ಪತ್ನೀತ್ವ ಊ ಸದ್ವಿಚಾರಗಳ ಸಖಿತ್ವ ಋ ಸಲ್ಲಕ್ಷ್ಯಗಳ ಸೋದರತ್ವ ೠ ಸತ್ಪ್ರವೃತ್ತಿಗಳ ಬಂಧುತ್ವ ಎ ಸತ್ಪ್ರೇರಣೆಗಳ ಆಪ್ತತ್ವ ಏ ಸದಪೇಕ್ಷೆಗಳ ಕುಟುಂಬಿಕತ್ವ ಐ ಸುಜ್ಞಾನದ ಸಹಚರ್ಯತ್ವ ಒ ಸದ್ವಿಶ್ವಾಸದ ಪ್ರಭುತ್ವ ಓ ಸದ್ವಾಕ್ಯಗಳ ಕಿಂಕರತ್ವ ಔ ಸದ್ವಿಷಯಗಳ ದಾಸ್ಯತ್ವ ಅಂ ಸತ್ಸಾಧನೆಗಳ ಪುತ್ರತ್ವ ಅಃ ಸದನುಭವಗಳ ಪುತ್ರೀತ್ವ ಕ ಸದಾಕರ್ಷಣೆಗಳ ಶ್ವಶುರತ್ವ ಕಾ ಸಾಫಲ್ಯಗಳ ಜಾಮಾತತ್ವ ಕಿ ಭಕ್ತಿಯ ದೀಪ್ತಿತ್ವ ಕೀ ವಿರಕ್ತಿಯ ವೈದ್ಯತ್ವ ಕು ನೀಚತೆ, ಸ್ವಾರ್ಥ, ಶೋಷಣೆಗಳ ಶತ್ರುತ್ವ ೨೪ ವಿದ್ಯಾರ್ಥಿಗಳಲ್ಲಿ ಅಮಿತವಾದ ಶಕ್ತಿ, ಉತ್ಸಾಹಗಳಿರುತ್ತವೆ. ಪ್ರಸಾರ ಮಾಧ್ಯಮಗಳಂತೆ ಕೆಟ್ಟ ರೀತಿಯಲ್ಲಿ ಕ್ರೀಡೆ, ವಿಲಾಸಾದಿಗಳಿಗವು ಬಳಕೆಯಾಗುವ ಬದಲು ಸಾಮಾಜಿಕ ಸದಸ್ಯರ ಮಧ್ಯೆ ತಿಳುವಳಿಕೆಗಳ ಪ್ರಸಾರ, ಮಾಲಿನ್ಯನಿವಾರಣೆಯ ಮಾರ್ಗದರ್ಶನ ಮುಂತಾದವುಗಳಿಗಾಗಿ ವಿನಿಯೋಗವಾಗುವ ರೂಢಿಯುಂಟಾದರೆ ಪ್ರಪಂಚವೆಷ್ಟೋ ಕ್ಷೇಮದ ನೆಲೆಯಾದೀತು; ಮೂಲಭೂತ ಪ್ರಶ್ನೆಗಳಿಗೆ ಬಡಿದಿರುವ ಕ್ಷಾಮಸಮಾನ ದುಸ್ಥಿತಿ ತಪ್ಪೀತು ೨೫ ಶಿಕ್ಷಣದಲ್ಲಿ ಸ್ನಾತಕ ಪದವಿಯ ಪ್ರಾಪ್ತಿಯ ವರೆಗಾದರು ಪಠ್ಯಕ್ರಮದಲ್ಲಿ ಧಾರ್ಮಿಕ ವಿಚಾರಗಳನ್ನು ಕಡ್ಡಾಯವಾಗಿ ಸೇರಿಸಿರುವ ವಸ್ತುಗಳಾಗಿಸಬೇಕು. ಆಗ ಮಾತ್ರ ಸಮಾಜದಲ್ಲಿ ಸಮರ್ಪಕ ಪರಿವರ್ತನೆಗಳುಂಟಾದಾವು. ತಂದೆತಾಯಿಗಳಂತೆ ದೇವರು ಹಿನ್ನೆಲೆಯಿಂದ ಸದಾ ನಮ್ಮನ್ನು ಕಾಪಾಡುತ್ತಿದ್ದಾನೆಂಬುದನ್ನು ಮನದಲ್ಲಿ ನೆಲೆಗೊಳಿಸಿದಾಗ ಧರ್ಮಶಾಸ್ತ್ರದ ವರ್ಣಮಾಲೆಗಳನ್ನು ಕಲಿಸಿದಂತಾಗುತ್ತದೆ. ನಮಗೆ ತಿಳಿಯದ ರೀತಿ ಲೋಕದಲ್ಲಾತ ಎಲ್ಲೆಲ್ಲೂ ಹರಡಿ ಕೊಂಡಿರುವನೆಂಬ ಸತ್ಯವನ್ನು ಹೃದಯಕ್ಕೆ

ತೊಗಿಸಿದಾಗ ಧರ್ಮಸಾಮ್ರಾಜ್ಯಕ್ಕೆ ಪ್ರವೇಶವನ್ನು ನೀಡಿದಂತಾಗುತ್ತದೆ. ಪ್ರಪಂಚವನ್ನು ಮೂಡಿಸಿದವ, ಮುಂದರಿಸುತ್ತಿರುವವ ಹಾಗು ಕೊನೆಗೆ ನಾಶಗೊಳಿಸಿ ತನ್ನಲ್ಲೀ ಲೀನವಾಗಿಸುವವ ಪರಮಾತ್ಮನೆಂಬುದನ್ನು ವಿದಿತಗೊಳಿದಾಗ ಧರ್ಮಾಂಗಣದಲ್ಲಿ ಪೀಠ ಕೊಡಿಸಿ ಕೂರಿಸಿದಂತಾಗುತ್ತದೆ, ಭಗವಂತ ಹೊರಪ್ರೇಳದಿಂದ ಎಲ್ಲವನ್ನೂ ನೋಡುತ್ತಿರುವುದರಿಂದ ಸದ್ಭಾವ, ಸದ್ವಿಚಾರ ಹಾಗು ಸತ್ಕಾರ್ಯಗಳ ಮೂಲಕ ಆತನ ಸಂತುಷ್ಟಿಗೆ ಪ್ರಯತ್ನಿಸಬೇಕೆಂಬುದನ್ನು ಮನದಟ್ಟಾಗಿಸಿದಾಗ ವಾಕ್ಯರಚನೆಯನ್ನು ತಿಳಿಸಿದಂತಾಗುತ್ತದೆ. ಮುಂದೆ ಪ್ರಾಥಮಿಕ ಶಿಕ್ಷಣದಲ್ಲಿ ವಿವಿಧ ಧರ್ಮಗಳ ಪ್ರಧಾನ ಗುರುಗಳ ಹಾಗು ಸಾಧುಗಳ ಚರಿತ್ರೆಗಳಿಂದ ಧರ್ಮ ವಿಸ್ತೃತಿಯಲ್ಲಿ ಮನವನ್ನು ಸಂಚಾರವಾಗಿಸಬೇಕು. ಮಾಧ್ಯಮಿಕ ಶಿಕ್ಷಣದಲ್ಲಿ ವಿವಿಧ ಧರ್ಮಗಳ ಸಂಸ್ಥಾಪಕರ ಮುಖ್ಯ ತತ್ತ್ವಗಳನ್ನರಿದು, ಸಂಕುಚಿತತೆ ನೀಗಿ ಮತಿಗಳನ್ನು ವಿಶಾಲಗೊಳಿಸಬೇಕು. ಧರ್ಮ ಸಮಾಜದ ಪ್ರಮುಖ ಭಾಗವಾಗಿದ್ದು ಅದರ ಬೆಳವಣಿಗೆಯಲ್ಲಿ ಅತ್ಯಧಿಕ ಪಾತ್ರಗಳನ್ನು ವಹಿಸಿರುವಂಥದು. ನವನಾಗರಿಕತೆಯು ಮಿಥ್ಯೆಯ ಸಹವಾಸಗಳಿಂದ ಅದು ಪೂರ್ತಿ ಪ್ರತ್ಯೇಕವಾಗಿರುವುದೆಂಬ ದೃಷ್ಟಿ ಪರಿಪುಷ್ಟವಾಗಿದೆ. ಸಮಾಜಶಾಸ್ತ್ರದಿಂದ ವಿವಿಧ ಸುಖ, ಸೌಕರ್ಯಗಳನ್ನು ಪಡೆಯುತ್ತಿದ್ದರು "ಎಲ್ಲಿರುವುದಯ್ಯಾ ನೀನನ್ನುವ ಸಮಾಜ ?" ಎಂದು ಕಲಿಗಣಗಳು ಆಶ್ಚರ್ಯಕಾರಕವಾಗಿ ಪ್ರಶ್ನಿಸುವ ಸ್ಥಿತಿಗಳೊದಗಿರುವುದು ಅದಕ್ಕಿರುವ ಸಹಜ ಪ್ರಾಧಾನ್ಯವನ್ನು ಕುಂದಿಸಿದುದರಿಂದಾಗಿ. ಮಾನವತೆ ಸುಭಿಕ್ಷದೊಡನೆ ಮುಂದರಿಯಬೇಕಾದರೆ ಮರಳಿಯುದನ್ನು ಪುನರುಜ್ಜೀವಿಸಬೇಕಾಗಿದೆ. ಸ್ನಾತಕಪೂರ್ವ ಶಿಕ್ಷಣದಲ್ಲಿ ಎಲ್ಲ ಧರ್ಮಗಳ ಪ್ರಮುಖ ತತ್ತ್ವಗಳ ಸಾರಗಳನ್ನು ಕಲಿಸಿ ಆ ಬಳಿಕ ಯುವಪೀಳಿಗೆಗೆ ಮುಸ್ಲಿಮ, ಕ್ರೈಸ್ತ ಹಾಗು ಹಿಂದೂಧರ್ಮಗಳ ವಿವಿಧ ತತ್ತ್ವವೇಗಳನ್ನು ಸಂಗ್ರಹರೂಪಗಳಲ್ಲಿ ವೇದ್ಯವಾಗಿಸಬೇಕು. ಮುಂದಿನ ತಿಳುವಳಿಕೆಯ ಪ್ರಾಪ್ತಿಯನ್ನು ಐಚ್ಛಿಕವಾಗಿಸಿ ವಿವಿಧ ಧರ್ಮಗಳ ಮೂಲಗ್ರಂಥಗಳ ಪ್ರಮುಖ ಭಾಗಗಳನ್ನು ಅಧ್ಯಯನಕ್ಕಿರಿಸಬೇಕು. ಹೀಗೀ ಕ್ಷೇತ್ರದಲ್ಲಿ ಪಾಂಡಿತ್ಯವನ್ನು ಸಂಪಾದಿಸಿ ಯಾವುದೇ ಧರ್ಮದ ದೃಷ್ಟಿಯನ್ನು ಮುದುಡಿಸದ ರೀತಿ ನೈಜ ಮಾನವೀಯ ಧರ್ಮವೊಂದರ ಕಿರಣಗಳನ್ನು ರೂಪಿಸಲು ಸಮರ್ಥನಾದವ ಪಾರಂಗತನಾದಂತಾಗುತ್ತದೆ. ರಾಷ್ಟ್ರೀಯ ಮಟ್ಟದಲ್ಲಿ ಸಾವಿರಾರು ಮಂದಿ

ನಾಗಗಮ ಹಿತಗಳನ್ನು ಸಲ್ಲಿಸಿತೆಂದರೆ ಪಟ್ಟಾಭಿಷಣ ಪ್ರಶಸ್ತಿಗಾತ್ರ ಪಾತ್ರನಾದಾನು. ಧಾರ್ಮಿಕ ಯಶಸ್ಸಿನ ವಿವಿಧ ಸೋಪಾನಗಳಿವು.

೨೬) ಮಣೆಯನ್ನು ಜೋಲಿ ಸೃಷ್ಟಿಯು ಮುನ್ನಡೆಯೊಂದು ಚಕ್ರಪ್ರ್ರವದ ಗತಿಯಲ್ಲಿ ಜರಗಿದೆ. ಪ್ರಾರಂಭದಲ್ಲಿ ಜಡಗಳ ಮುಖ್ಯ ಜೀವಿಗಳಿಗೆ ಪ್ರಾಧಾನ್ಯ ಮೂಡಿತು. ಆ ಜೀವಿಗಳ ಸಮೂಹದಲ್ಲಿ ಕ್ರಮೇಣ ಮನುಷ್ಯರು ಮೇಲ್ಮೆಯನ್ನು ಸಂಪಾದಿಸಿಕೊಂಡರು. ಹಲವು ಶತಕಗಳು ಸಾಗಿ ತಿಳಿವುಗಳು ವ್ಯವಸ್ಥಿತಗೊಂಡಾಗ ಆ ಮೇಲ್ಮೆ ವಿದ್ಯಾವಂತರ ಕರಗಳಿಗೆ ದೊರಕಿತು. ಅವರದನ್ನು ಶೀಘ್ರವಾಗಿ ವಿಲಾಸಗಳ ಬಳಗಕ್ಕೆ ಸಲ್ಲಿಸತೊಡಗಿದರು. ಅವದನ್ನು ವಿನಾಶಕ್ಕೆ ಮುಟ್ಟಿಸುತ್ತಿವೆ. ಈ ಚಕ್ರ ಪೂರ್ಣಗೊಂಡಾಗ ಮರಳಿ ಜಡವಸ್ತುಗಳಿಗೆ ಪ್ರಾಧಾನ್ಯ ಪ್ರಾರಂಭವಾದೀತೆಂದು ತೋರುತ್ತದೆ; ಕೊಬ್ಬುತ ಹಿರಿದು ಮರಾಳಿಲಿ ಜಗದಿಂ। ದಬ್ಬುವ ತೆರದೊಳು ನರ ಸಮುದಾಯವ। ತಬ್ಬಿಬ್ಬಿನಾನಿಲ ಭೀಕರ ಬಳಕೆಯ ಸಿಡಿತಾಗಾಗೊದಗೆ। ಹಬ್ಬಲು ಮಿತ್ತುವು ವಿಕಲಾಕೃತಿಗಳು। ಹುಬ್ಬುಗಳೆತ್ತಿರಿ ಹಿಂಸಕ ದೈತ್ಯರೆ। ಬೊಬ್ಬೆಯ ನೆರೆಸುವುದಾಯಿತೆ ನಾಗರಿಕತೆಯೀ ಮಾನವನ॥ ೨೭) ಚಿತ್ರದುರ್ಗದಲ್ಲೊಂದು ಕಡೆ "ಅಸ್ಪೃಶ್ಯತಾ ಪೋಷಕರೆ ನಿಮ್ಮ ಹುದಿಯಂತಹ ಜನ್ಮಕ್ಕೆ ಧಿಕ್ಕಾರ" ಎನ್ನುವ ಬರಹ ಕಾಣಿಸಿತು. ಕಾಯವನ್ನು ಮೀರಿ ಬೌದ್ಧಿಕ ಕಾರ್ಯಗಳನ್ನೇ ಅಸ್ಪೃಶ್ಯವಾಗಿಸಿರುವ ವಿದ್ಯಾವಂತರಿಗೇ ಈ ಮಾತು ಮಿಗಿಲಾಗಿ ಅನ್ವಯಿಸೀತೆಂದು ಜರೆಯುವಷ್ಟು ಕಾಠಿಣ್ಯ ಮೇಧಾವಿಗಳಲ್ಲಿ ವ್ಯಕ್ತವಾಗಲಿಕ್ಕಿಲ್ಲ. ಹಾಗಿದ್ದರು ಸರಳವಾದ ಕಾಯಾಸ್ಪೃಶ್ಯತೆಗಿಂತ ಬೌದ್ಧಿಕಾಸ್ಪೃಶ್ಯತೆ ನಿರಂತರವಾಗಿಯೂ ಘೋರವಾದುದೆಂಬುದು ನಿಸ್ಸಂದೇಹ. ಹಿಂದೆ ವ್ಯಕ್ತಿಗಳು ಅಸ್ಪೃಶ್ಯರೆನ್ನಿಸಿದಾಗಲು ಅವರ ರಚನೆಗಳೆಲ್ಲ ಸ್ಪೃಶ್ಯವಿದ್ದುವು. ಆದರೆ ಸಾಧಾರಣವಾಗಿ ಕಾರ್ಯಗಳನ್ನೇ ಅಸ್ಪೃಶ್ಯಗೊಳಿಸಿ ಸಾಮಾಜಿಕ ಸಂದರ್ಭಗಳಲ್ಲಿ ಮನುಷ್ಯರಿವರು ಅಸ್ಪೃಶ್ಯತೆಯ ಹಕ್ಕನ್ನು ಪಡೆದಿರುವರನ್ನಿಸಿದರೆ ಅದು ಕೇವಲ ವಿಫಲತೆಯ ಬೆಡಗಾದೀತಷ್ಟೆ. ೨೮] ಹೊಸ ಬಂಧು ಬಂದು ಹಳೆಯ ಬಂಧುವನ್ನು ದೂರೋಡಿಸಿದ ರೀತಿ ಮಾನವಪಥದಲ್ಲಿ ನವಸುಖಗಳು ಆವಿಷ್ಕಾರವಾಗಿ ಪರಂಪರಾಗತವಾದ ಪಾರಮಾರ್ಥಿಕ ಸುಖಗಳನ್ನು ಹಿಂದಕ್ಕಟ್ಟಿವೆ. ಆದರೆ ನಿಜವಾಗಿವು ಸಹಜವಾದ ಸುಖಗಳಲ್ಲ. ಭೌತಿಕಾಗಿಸ ಮಾನವೋನ್ನತಿ। ತಂದಿತೆಂಬೆಯ ಸುಖವ

ಬಾಳ್ವಿಗೆ | ಸುಖಿಸಿದಲ್ಲವು ಸುಖದ ನೆರಳರಿ | ಬುದ್ಧಿ, ಭಾವವ ಕೆಡಿಪ ಸುಖವಿದು | ಸಿದ್ಧಿ ಬುದ್ಧಿಯ ಕಂದಿಸುತಲಿದೆ | ಸ್ವೈಜ ಲಕ್ಷ್ಯವ ಮರೆಸಿ ಮಿಗಿಲಿಪ ದುಃಖಕ್ಕೊದಿಹುದೋ || ಕಾಗೆ ಪ್ರತಿಬಿಂಬದಲ್ಲೇ ಮತ್ತೊಂದು ಹಕ್ಕಿಯನ್ನು ಗುರುತಿಸುವಂತೆ ನಾನಾ ಪ್ರಭಾವಗಳಿಂದಿಂದು ಮನಸ್ಸು ಸುಖಗಳ ಪ್ರತಿಛಾಯೆಗಳನ್ನೇ ಅವೆಂದು ತಬ್ಬಿಕೊಂಡಿದೆ. ಈ ಸೇರಿಕೆಯನ್ನು ಬೇರ್ಪಡಿಸುವುದು ಸುಲಭಸಾಧ್ಯವಿಲ್ಲವಾಗಿದೆ. ೨೯) ಹೊಸ ಸಿದ್ಧಿಗಳಲ್ಲಿ ನಂಬುಗೆಗಳು ಸನಾತನವಾಗಿ ಮುಂಬರಿಯಬೇಕಾಗಿದ್ದಂತಹ ಪವಿತ್ರ ವಿಶ್ವಾಸಗಳನ್ನು ಕುಂದಿಸಿವೆ. ಕಿರಿದಿಹ ಸಾಧನ ಪಡೆದರು ಧನ್ಯತೆ 1 ಯೊರೆದಿಹ ಸಭ್ಯರು ಸಾಸಿರ ಜನನವ | ಸರಣಿಲಿ ಹವೆಜಲವಾಪಾರೊದಗಿಸಿ ಸಲಹಿರೆ ಜಗರಾಜ | ನೆರೆ ತಾಯುಣ್ತಂದೆಯ ತೆರ ಮರೆಯಿಂದಲಿ | ಜಿರಿಯರು ಗೌರವವಾತನ ಕರದೆಡೆ | ಜರೆಯುತ ಧಿಕ್ಕರಿಸುವ್ಯೆ ನಾಗರಿಕತೆಯೇ ನರನಿದುವೆ || ಹಿಂದೊಬ್ಬಸುರನು ಹರಿಯೆಲ್ಲಿಂದನು | ಮುಂದರಿದಿಹ ನಾಗರಿಕತೆ ನಡುವೊಳು | ಗೊಂದಲ ಕವಿಯುತ ಮನಮನ ಕೇಳುತಲಿರಲೀ ಪ್ರಶ್ನೆಯನು | ಹೊಂದುತಲತಿಭಯ ಜಗವನೆ ಮುದುಡುತ | ನಿಂದನು ಮೂರೊಂದೆಡೆಯಲಿ ಹುದುಗುತ 1 ಮುಂದೋರುತ ಹುಸಿ ಕುಣಿದಿದೆ ಮದದಲಿ ನಾಗರಿಕತೆಯೇ ನರನಿದುವೆ ||೩೦ ಅತಿಥಿಯನ್ನು ದೇವನನ್ನಾಗಿ ಪರಿಗಣಿಸುತ್ತಿರುವುದು ಹಿಂದಾರ್ಯರ ರೂಢಿಯಾಗಿತ್ತು. ಧರ್ಮದ ಸ್ಥಾನದಲ್ಲಿ ಅರ್ಥಕ್ಕೆ ಪ್ರಾಧಾನ್ಯ ಮೂಡಿ ಕಾಲಾಂತರದಲ್ಲಿ ಅಧಿಕಾಧಿಕವಾಗಿ ಬೆಳೆಯುತ್ತ "ಆಗಂತುಕನೇ ಹಣವನ್ನು ಕೊಡುವವನಾಗು" "ಆಗಂತುಕನೇ, ನಮ್ಮ ಬಾಳ್ವಿಗೆ ಬೇಕಾದಷ್ಟು ಹಣವನ್ನು ಕೊಡುವವನಾಗು" "ಆಗಂತುಕನೇ, ನಾವು ವಿವಿಧ ವಿಲಾಸಾಪೇಕ್ಷೆಗಳನ್ನು ತಣಿಸಿಕೊಳ್ಳುವಂತೆ ಸಾಧ್ಯವಾದಷ್ಟು ಹೆಚ್ಚು ಹಣವನ್ನು ನೀಡುವವನಾಗು" ಎನ್ನುವಂಥ ರೀತಿಗಳು ನವನಾಗರಿಕತೆಯಲ್ಲಿ ಪ್ರಬಲವಾಗಿ ಸ್ಥಾಪನೆಗೊಂಡುವು. ಅವುಗಳೊಂದಿಗೆ ಕೊನೆಗೀವಾಗ "ಅತಿಥಿ ಕಿಂಕರೋ ಭವ" "ಅತಿಥಿಯೇ ಸೇವಕನಾಗು" "ಅತಿಥಿ ಮಾಗಧೋ ಭವ" "ಅತಿಥಿಯೇ ಹೊಗಳುಭಟನಾಗು" "ಅತಿಥಿ ದಾಸೋ ಭವ" "ಬಂದವನೇ ನನಗೆ ದಾಸನಾಗು" "ಅತಿಥಿ ಶಿಷ್ಯೋ ಭವ" "ಮನೆ ಹೊಕ್ಕ ಮಹನೀಯ ನನಗಾಗೋ ಶಿಷ್ಯ. ಕಾದಿಹುದು ನನ್ನ ಮೇಲ್ಮೆ ನಿನ್ನ ಶಕ್ತಿಗಳ ವ್ಯಯದಿ ಮುಂದಕೇರಿ" ಎಂಬ ರೀತಿಯ ದಿನಗಳೊದಗಿರುವುದನ್ನು ಕಾಣುತ್ತೇವೆ.

ಮೂರು ಕಾಸು ವ್ಯಾಪಾರ, ನಾಲ್ಕು ಗಂಟೆ ಕೋರಿತ ಎನ್ನುವುದನ್ನು ಸಾಕ್ಷೀಕರಿಸುವಂತಲ್ಲದಿದ್ದರು ಒಂದೂಟ, ಕೆಲವು ರೂಪಾಯಿಗಳನ್ನಿತ್ತು ಅಲ್ಲಿಲ್ಲಿನ ಮಹಾಬ್ರಾಹ್ಮಣರು ಜೀವನದ ಪೂರ್ತಿ ಬದಲಾವಣೆಗಳನ್ನೇ ನಿರ್ದೇಶಿಸಿಬಿಡುತ್ತಾರೆ. ಸತ್ಕಾರ್ಯಕ್ಕೆ ಅವರಿಂದೊದಗುವ ಬೆಂಬಲವೆಂದರಿದೇನೇ. ಹಗರಿಬೊಮ್ಮನಹಳ್ಳಿಯಲ್ಲಿ ಮಹನೀಯರೊಬ್ಬರು ಕಿವಿಗೆ ಮಂತ್ರವೂದಿ ಹೀಗಾದೇಶಿಸಿದಾಗ ಮನಸ್ಸು ಬಹಳವಾಗಿ ಚಡಪಡಿಕೆಗೆ ಗುರಿಯಾಯಿತು. ಇಂಥವರೇ ನಮ್ಮ ಸಂಸ್ಕೃತಿಯ ಧ್ವಜಗಳನ್ನು ಹೊತ್ತಿರುತ್ತಾರೆಂಬುದನ್ನು ಗಮನಿಸುವಾಗ ಆಶ್ಚರ್ಯವಾಗುತ್ತದೆ. ೩೧) ಹಿಂದಿನ ಕಾಲದಲ್ಲಿ ಅನ್ನದಾನವೆಂಬುದು ಬಾಳ್ವೆಯಲ್ಲಿ ಅತ್ಯಂತ ಪುಣ್ಯದಾಯಕವಾದ ಕಾರ್ಯವೆನ್ನಿಸಿತ್ತು. ಆದರೆ ವ್ಯವಹಾರಗಳು ಧರ್ಮದಿಂದ ಅರ್ಥಪ್ರಧಾನತೆಯ ವ್ಯವಸ್ಥೆಯೆಡೆಗೆ ಮುಂಬರಿದಂತೆ ಸಿದ್ಧಾಹಾರಗಳ ವಿಕ್ರಯ ಕೂಡ ತಲೆಯೆತ್ತಿತು. ಕಾಲ ಸರಿದಂತೆ ಹೇಗಿದ್ದರು ಗ್ರಾಹಕರು ದೊರೆಯುತ್ತಿರುವುದರಿಂದ ಅತ್ಯಂತ ಲಾಭದೊಂದಿಗವನ್ನು ಮಾರುತ್ತಿರುವುದೇ ಸಾಮಾನ್ಯ ರೂಢಿಯೆನಿಸಿದೆ. ಬಳ್ಳಾರಿಯಲ್ಲೊಬ್ಬ ಉಪಹಾರಗೃಹದ ಯಜಮಾನ ಬೆಳಗ್ಗಿನಿಂದ ರಾತ್ರಿಯ ವರೆಗು ಸದ್ವಿಚಾರಗಳ ಸನ್ಮಾನಕ್ಕೆ ತುಸು ಸಾವದು ಬಿಡುವೊದಗಲಾರದಷ್ಟು ಗಿರಾಕಿಗಳು ಆಗಮಿಸುತ್ತಿರುವುದೇ ತನ್ನ ವೈಭವದ ಹೆಚ್ಚಳಕ್ಕೆ ಸಾಲದೆಂದು "ಇಡ್ಲಿ ತೆಕ್ಕೊಂಡು ನೀನೇ ನನಗೆ ಸಹಕಾರ ನೀಡುತ್ತೀಯ ?" ಎಂದು ದೀನನಾಗಿ ಕೇಳುತ್ತಾನೆ. ೩೨) ಯಾವುದೋ ಕ್ಷಣದಲ್ಲಿ ತಂದೆ ನೀಡಿದ ಮಾತಿನ ಪೂರೈಕೆಗಾಗಿ ಹದಿನಾಲ್ಕು ವರ್ಷಗಳ ವನವಾಸವನ್ನೇ ಅನುಭವಿಸಲು ಸಿದ್ಧನಾದ ಶ್ರೀರಾಮನಂಥ ಮಹಿಮರು ಹುಟ್ಟಿ ಮೆರೆದ ನಾಡಿನಲ್ಲಿ ಕೆಲವು ತಾಸುಗಳ ಮೊದಲಷ್ಟೇ ತಾನಾಡಿದ ಮಾತುಗಳನ್ನು ನಿಷ್ಫಲಗೊಳಿಸುತ್ತಿರುವುದು ಬಾಳ್ವೆಯಲ್ಲಿ ಸಾಮಾನ್ಯಾಭ್ಯಾಸವಾಗಿದೆ. ಅರ್ಥಕ್ಕೆ ಪ್ರಾಧಾನ್ಯ ಹೆಚ್ಚಿ ಮಿತಿರಹಿತವಾಗಿ ಬೆಳೆದಂತೆ ಲಕ್ಷ್ಮಿ ಭಾರತಿಯನ್ನು ಪೂರ್ತಿಯಾಗಿ ಹೊರತಳ್ಳಿದ್ದಾಳೆ. ಬರಿಯ ನಾಮಾವಶೇಷವನ್ನು ಮಾತ್ರವೇ ದೇಶವಿಂದು ಧರಿಸಿಕೊಂಡಿರುವುದು. ಓಂಕಾರ ಚಿತ್ರದಿಂದ ನಿಲಯವನ್ನು ಶೋಭಿತವಾಗಿರಿಸಿರುವವರು ಕೂಡ ಸಾಮಾನ್ಯ ರೂಢಿಯಿಂದ ವ್ಯತಿರಿಕ್ತರಾಗುವುದಿಲ್ಲವೆಂಬುದನ್ನು ಹಡಗಲಿಯಲ್ಲೊಬ್ಬರು ಪ್ರಮಾಣೀಕರಿಸಿದರು. ತಮ್ಮ ನಡೆಸುವಿಗೆ [illegible] ನಿರುಕಿಸುತ್ತಿರುವ ಸರ್ವಸಾಕ್ಷಿಯಂತ ಅಪ್ರಾಮಾಣಿಕ ರೀತಿಗಳಿಗೆ

ಶಿಕ್ಷೆಯೊದಗಿಯೂ ಪೋಬುದನ್ನು ಜನರಿಂದು ಮರೆತಿರುವುದು ಸಿಜ್ಜಳವಾಗಿದೆ. ಪ್ರಕಾಶಕರಲ್ಲಿ ಮಾತ್ರವೇ ತಮ್ಮ ನಿಲುವುಗಳ ಪ್ರತಿಬಿಂಬಗಳನ್ನು ಕಂಡು ಹಲವರು ಜರೆಯುತ್ತಿರುವುದು ಗೋಚರಿಸುತ್ತದೆ. ಅದೇ ರೀತಿ ರಾಜಕಾರಣಿ, ಮಂತ್ರಿ ಮುಂತಾದವರಲ್ಲಾದರು. ಜನ ತಳೆದಿರುವ ಪಥ ದೋಷಗಳರುಹಿರೆ I ಮನುಜನ ವೈಯುಕ್ತಿಕವಿಹ ಲೋಪಗ I ಳಸು ಹಿರಿಗ್ಯೆವುದು ಗುಂಪಾತನ ಬೆಸೆದಿಹ ಕುಂದೊರೆಯುವುದು I ಹಸಿಯುನಿತಷ್ಟು ಸುಧಾರಕ ನಿಲುವನು I ಮನಕಾಷ್ಯಾನವನೆಸಗದೆ ನೀಚತೆ I ಯನೆ ಕಲೆತಿರುವುದು ಹೇಳ್ ನಾಗರಿಕತೆಯೆಂಬರೆ ನರನ II

೩೩ ದಟ್ಟಣೆಗಳಲ್ಲಿಂದು ಹಲವಾರು ಶರೀರಗಳು ಹತ್ತಿರ ಹತ್ತಿರವಾಗಿ ಸೇರಿದಾಗ ಅನೇಕ ತಲೆಗಳು, ಕೈಕಾಲುಗಳುಳ್ಳ ಮಹಾಕಾಯವೊಂದು ನಿರ್ಮಾಣವಾದಂತಾಗಿ ರಾವಣೋದ್ಭವವೇ ಜರಗಿತೆಂದು ತೋರುತ್ತದೆ. ದುಷ್ಟತೆ, ಭ್ರಷ್ಟತೆಗಳೇ ಮೈದಾಳಿದ, ನೀಚಾಚರಣೆಗಳೇ ವಿವಿಧಾಂಗಗಳಾಗಿ ವಿಜೃಂಭಿಸುತ್ತಿರುವ ಸದ್ಯದ ಬಾಳ್ವೆಯ ದಶಶಿರನನ್ನು ಮಥಿಸಲು ಮತ್ತೊಮ್ಮೆ ಜಗಪಾಲಕ ನೂತನ ಶ್ರೀರಾಮನಾಗಿ ಅವತರಿಸಬೇಕಾಗಿದೆ. ೩೪ "ದಿವಸದಲ್ಲಿ ಮೂರನೆ ಬಾರಿ ದುರ್ವಿಚಾರವನ್ನು ಸ್ವಾಗತಿಸುವುದಿಲ್ಲ. ವಾರದಲ್ಲಿ ಮೂರನೆ ಸಲ ವಿಕಾರಕ್ಕೆ ನೆಲೆಕೊಡುವುದಿಲ್ಲ. ಪಕ್ಷದಲ್ಲಿ ಮೂರನೆ ಬಾರಿ ನೀಚಪ್ರವೃತ್ತಿಯನ್ನು ಮಾಸಿಸುವುದಿಲ್ಲ. ತಿಂಗಳಲ್ಲಿ ಮೂರನೆ ಬಾರಿ ವಿಲಾಸಡೆಡೆಗೆ ಸಾಗುವುದಿಲ್ಲ. ವರ್ಷದಲ್ಲಿ ಮೂರನೆ ಬಾರಿ ಸಮಾಜದ್ರೋಹ ಗೈಯುವುದಿಲ್ಲ" ಹೀಗಿರುವ ನಿಯಮಗಳನ್ನು ಜನರು ಧರಿಸಿಕೊಂಡರಾದರೆ "ಮುಂದಿನ ಮಗು ನಮಗೀಗಲ್ಲ. ಮೂರನೆ ಸಂತತಿ ಬೇಕಿಲ್ಲ" ಎನ್ನಬೇಕಾಗಿರುವ ಸ್ಥಿತಿಯನ್ನು ಬದಲಿಸಬಹುದಾದಷ್ಟು ಸಂಪನ್ನತೆ ದೇಶದಲ್ಲಿ ಧಾರಾಳವಾಗಿದೆಯೆಂಬುದು ನಿಶ್ಚಯ ೩೫ ಇಂದು ಬೇರೆಲ್ಲ ವಸ್ತುಗಳು ಸುತ್ತೆಡೆ ಹೇರಳ ಪ್ರಮಾಣದಲ್ಲಿ ಲಭ್ಯವಾಗುತ್ತಿರಬಹುದು. ಆದರೆ ಮಾನವತೆಯನ್ನು ಮಾತ್ರ ಅಸ್ಪೃಶ್ಯಗೊಳಿಸಿ ಬಾಳ್ವೆಯಿಂದ ದೂರಗೊಳಿಸಲಾಗಿದೆಯೆಂಬುದು ವಿಚಿತ್ರವಾದ ಕಠೋರ ಸತ್ಯವಾಗಿದೆ. ೩೬ ಹಿಂದಿನ ಕಾಲದಲ್ಲಿ ಭಗವಂತ ಆಗಾಗ ಭಕ್ತರ ಮುಂದೆ ಪ್ರತ್ಯಕ್ಷನಾಗಿ "ಏನು ವರ ಬೇಕು ?" ಎಂದು ಕೇಳುತ್ತಿದ್ದ ರೀತಿಯಲ್ಲೇ ಇಂದಾದರು ವಿಚಾರಿಸುವವರು ದಾಲ್ಕೆಡೆ ಅಧಿಕ ಸಂಖ್ಯೆಯಲ್ಲಿದ್ದಾರೆ. ಆದರೆ ಸತ್ಕಾರ್ಯಕ್ಕೆ ಸಹ

ಕಾರವೆಂದೊಡನೆ ಮಾತ್ರ ಅವರಾಮೆಗಳಂತೆ ತ್ವರಿತವಾಗಿ ಮುದುಡಿಕೊಳ್ಳುತ್ತಾರೆ

೩೭ ನಿಜವಾಗಿ ಹಿತಕಾರಿಯಿದ್ದರು ಸರಿಯೇ ತಮಗೆ ಬೇಡವೆನಿಸುವ ವ್ಯವಹಾರವಾದರೆ ತಮ್ಮನ್ನು ಸದಾ ಬೇಡುತ್ತಿರುವ ಸ್ಥಿತಿಗಳಿಗೆ ತಳ್ಳಿರುವುದರಲ್ಲಿ ನವಪ್ರಭುಗಳು ಬೀಗುತ್ತಾರೆ. ಬೇಕೆನಿಸಿದರೆ ಅದೆಷ್ಟು ಹಾನಿಕಾರಕವಿದ್ದರು ಸಂಬಂಧಿಸಿದ ವ್ಯಕ್ತಿಯನ್ನು ವಿಲಾಸ ವಿಭವಗಳೆಡೆಗೆ ಸಾಗಿಸುವ ಮಟ್ಟದ ಸಹಕಾರ ಸಲ್ಲಿಸುತ್ತಾರೆ. ತಮಗೆ ದೊರೆತ ಪ್ರಭುತ್ವವನ್ನವರು ವಿವೇಕಾನ್ವಿತ ಪಥದಲ್ಲಿ ತಮ್ಮದೇ ಅಭ್ಯುದಯಕ್ಕಾಗಿ ಬಳಸಲಿಲ್ಲವೆಂಬುದನ್ನಿದು ಸಮರ್ಥಿಸುತ್ತದೆ.

೩೮ ತಾವು ಸಹಾಯವೆಂದು ನೀಡಿದ ಹಣ ಯಾವುದೇ ಸತ್ಕಾರ್ಯವನ್ನು ಮುಟ್ಟಲಾರದ ಹಾಗೆ ಅದನ್ನು ಸಂಗ್ರಹಿಸಲಿಕ್ಕಾಗಲೀ ಅಥವಾ ಬೇರೊಂದು ವಿಫಲ ನಿರೀಕ್ಷೆಗಾಗಲೀ ಹೆಚ್ಚಿನ ಕಾಲ, ಶಕ್ತಿಗಳ ವ್ಯಯ ಘಟಿಸಿ ಅಷ್ಟು ಮೊತ್ತ ಅಪಹಾರಕ್ಕೆಂದೇ ಸವೆಯುವಂತೆ ನೋಡಿಕೊಳ್ಳುವ ಕುಟಿಲ ದಾನಿಗಳಿಂದು ಹತ್ತೆಡೆ ವ್ಯಾಪಿಸಿಕೊಂಡಿದ್ದಾರೆ. ೩೯] ಧನಾಲಯಗಳೇ ಮುಂತಾಗಿ ಎಷ್ಟೋ ಸಂಪನ್ನ ಸ್ಥಾನಗಳಲ್ಲಿರುವ ಪ್ರಭುಗಳು ಸಾಮಾನ್ಯವಾಗಿ ಸತ್ಕಾರ್ಯಗಳಿಗೆ ಸಹಕರಿಸದಿರುವ ಅಥವಾ ಕನಿಷ್ಠ ಪ್ರಮಾಣದಲ್ಲಿ ಸಲ್ಲಿಸುವ ರೀತಿಯಲ್ಲೇ ಸಾಮಾನ್ಯರಾದರು "ನೋಡಿ ಸ್ವಾಮಿ, ಇದು ಬಡವರ ದೇಶ. ವಿಲಾಸಗಳಿಗೆ ಅತ್ಯಧಿಕವಾಗಿ ಮುಟ್ಟಿಸಬೇಕಿರುವಾಗ ಉತ್ತಮ ಕಾರ್ಯಗಳಿಗೆ ಅತ್ಯಲ್ಪ ಮೊತ್ತಗಳನ್ನು ನೀಡುವುದಾದರು ಸಾಧಾರಣವಾಗಿ ಅತೀವ ಕಷ್ಟವೆನ್ನಿಸುತ್ತದೆ. ಅದೇ ರೀತಿ ನಮಗಾದರು ಹೊಟ್ಟೆಪಾಡುಗಳೇ ಬಹಳ ಪ್ರಯಾಸಕರವಾಗಿರುವುದರಿಂದ ವಿವಿಧ ವಿಲಾಸಾದಿಗಳ ಸಲುವಾಗಿ ನಿಮ್ಮ ಶ್ರಮಗಳಿಗೆ ಅಧಿಕ ವೇತನಗಳನ್ನು ತಲಪಿಸಲು ಸಾಧ್ಯವಾಗುವುದಿಲ್ಲ. ಶ್ರೀಮಂತವಾದ ಪಾಶ್ಚಾತ್ಯ ರಾಷ್ಟ್ರಗಳವರನ್ನು ತಾವು ನೋಡಿ ಆಡಂಬರದ ಪೋಷಾಕುಗಳನ್ನು, ವಿಲಾಸಗಳನ್ನು ತಮ್ಮ ಹಕ್ಕುಗಳಾಗಿ ಗೈದುಕೊಳ್ಳಬಾರದು. ದಾರಿದ್ರ್ಯ, ಹಸಿವೆಗಳಿಂದ ಅಲ್ಲಲ್ಲಿ, ಪದೇಪದೇ ಮಡಿಯುತ್ತಿರುವವರ ಮಧ್ಯ ತಾವು ಹೆಚ್ಚಿನ ಸುಖ, ಸೌಕರ್ಯಗಳನ್ನು ನಿರೀಕ್ಷಿಸುವುದು ಸರಿಯಲ್ಲ. ದಯವಿರಿಸಿ ವಿದ್ಯಾವಂತರು, ನಿಜವಾದ ಹೆಚ್ಚಿನ ತಿಳಿವುಗಳುಳ್ಳವರೆಂಬ ಮಾನ್ಯತೆಯಿಂದ ಪ್ರಸಾದವೆನ್ನುವ ರೀತಿ ನಾವು ತೆಗೆದೀಯುವ ಕಡಿಮೆ ಪ್ರಮಾಣಗಳಲ್ಲಿ ಸಂತೃಪ್ತಿ ತಾಳಿ, ಸುಧಾರಿಸಿಕೊಳ್ಳಲು ಕಲಿತುಕೊಳ್ಳಿ" ಎನ್ನುವ ಸಂದೇಶಗಳನ್ನೀಯುತ್ತ ಸರಕಾರದ ನೀಡಿಕೆಗಳಲ್ಲಿ

ಯೋಗ್ಯನಾದ ನಿಯಂತ್ರಣ ತರಲು ಶಕ್ತರಾಗಿದ್ದರೆ ದೇಶಗಳಲ್ಲಿರುವುದು ಸಮಸ್ತರ ಪ್ರಭುತ್ವದ ವ್ಯವಸ್ಥೆಯೆಂದು ಯಾವ ಮೂರ್ಖನಾದರು ಧಾರಾಳವಾಗಿ ಸಮ್ಮತಿಸಿರಲು ಸಾಧ್ಯವಾಗಿರುತ್ತಿತ್ತು. ೪೦) ಬಾಹ್ಯಾಹಾರಗಳಲ್ಲಿ ಮನುಷ್ಯ ಶಕ್ತಿಯನ್ನು ಹೆಚ್ಚಿಸಿದಷ್ಟು ಭೌತಿಕ ವಿಷಯಗಳಲ್ಲೇ ಆತನಾಸಕ್ತಿಯನ್ನವು ಪುಷ್ಟಪಡಿಸುತ್ತವೆ. ಸದ್ವಿಚಾರ, ಸದ್ಭಾವಗಳಲ್ಲಾತ ಶ್ರದ್ಧಾವಂತನಾದಾಗ ಶಾಶ್ವತವಾದ ಸತ್ಯಗಳೆಡೆಗೆ ಬಾಳ್ವೆಯನ್ನು ಮುಂದರಿಸುತ್ತವೆ. ೪೧) ಜೀವನದಲ್ಲಿ ದೈಹಿಕ, ಮಾನಸಿಕ ಹಾಗು ಸಾಮಾಜಿಕ ಹೀಗೆ ತ್ರಿಮುಖವಾಗಿರುವ ತಾಪತ್ರಯಗಳನ್ನು ನಿವಾರಿಸಿಕೊಂಡು ಸಲ್ಲಕ್ಷ್ಯವನ್ನು ಹೊಂದಿ ಯಶಸ್ಸಿನಗಳನ್ನು ಸೇರುವುದೆಂದರೆ ದೊಡ್ಡ ಸಾಗರವನ್ನೇ ದಾಟಿದಷ್ಟು ಪ್ರಯಾಸಕರವಾಗಿದೆ. ಆದರಿಂದಲೇ ಬದುಕನ್ನು ಕಡಲಿಗೆ ಹೋಲಿಸುತ್ತಾರೆ. ೪೨] ಹಾಗೆ ನೋಡಿದರೆ ಭೂಮಿಯನ್ನು ಸಹ ಅದೊಂದು ಸಾಗರಕ್ಕೆ ಹೋಲಿಸಬಹುದಾಗಿದೆ. ನೀರಂತೆ ಹವೆಯಲ್ಲಿ ನಾನಾ ರೀತಿಗಳ ವಿಪುಲ ತರಂಗಗಳನ್ನು ಹರಡಿರುವುದು. ಹಕ್ಕಿಗಳಿಲ್ಲಿ ಮೀನುಗಳಂತೆ ಸಂಚರಿಸುತ್ತಿರುತ್ತವೆ, ತಿಮಿಂಗಿಲಗಳಂತಿದ್ದ ಮಹಾಜೀವಿಗಳಿಂದು ನಾಶನಾಗಿರುವುದಾದರು ಮನುಷ್ಯರು ವಿರಚಿಸಿರುವ ಹಡಬಂಡಿಗಳವಕ್ಕೆ ತುಲನೆಯಾಗಿವೆ. ವಾಹನಗಳೇ ಘನಪ್ರಾಣಿಗಳಂತಿವೆ. ೪೩] ಸೃಷ್ಟಿಯ ಕಣಕಣದಲ್ಲಿ ಕೂಡ ಅಪ್ರತಿಮನಾದ ಪರಿಪೂರ್ಣತೆ ನೆಲಸಿದೆ. ಅಲ್ಲಿ ಗಂಡಿದೆ, ಹೆಣ್ಣಿದೆ, ಶಕ್ತಿ, ಸತ್ಯ, ಶಿವ, ಸೌಂದರ್ಯ ಬಾಳ್ವೆಯೆಲ್ಲ ಸಂಪತ್ತುಗಳ ಮೂಲಗಳು ಸುಪ್ತವಾಗಿವೆ. ೪೪] ಒಂದು ಸುಳ್ಳಾಡಿದಾಗ, ಅನ್ಯಾಯದ, ಅಪ್ರಾಮಾಣಿಕತೆಯ ಕೆಲಸ ಗೈದಾಗ, ಅನಾಚಾರ ನಡೆಸಿದಾಗ ಮನುಷ್ಯನ ಒಳಮನಸ್ಸು ಅದನ್ನು ವೀಕ್ಷಿಸಿರುತ್ತದೆ ಮತ್ತು ಆ ಬಗ್ಗೆ ಹೊರಗಿನಾರಿಗು ಗೊತ್ತಾಗದ ರೀತಿ ಹಿನ್ನೆಲೆಯಲ್ಲಿ ತಿವಿಯತೊಡಗುತ್ತದೆ. ಹೀಗೆ ಸರ್ವದಾ ಕ್ರಿಯಾಶೀಲನಾಗಿರುವ ಸರ್ವಸಾಕ್ಷಿಯೇ ನಿಜವಾದ ಪರಮಾತ್ಮಾಂಶವಾಗಿದೆ. ೪೫] ಸಾಮಾನ್ಯವಾಗಿ ಶಿವಭಕ್ತಿ ವಿರಕ್ತಿ, ಶಕ್ತಿಗಳಿಗೆ ನೆಲೆಯಾಗಿದ್ದು ವಿಷ್ಣುಭಕ್ತಿ ಭುಕ್ತಿ, ರಕ್ತಿಗಳಿಗೆ ಬೀಡಾಗಿರುತ್ತದೆ. ಹರಿನತರ ಧನಾಸಕ್ತಿ ಸಾಧಾರಣವಾಗಿ ಅಧಿಕವಿರುತ್ತದೆ. ಪರಂಪರಾಗತವಾದ ಕನಿಷ್ಠ ಪ್ರಮಾಣದ ಶೋಷಣೆಗಳಲ್ಲಿ ವಿಪ್ರರೇ ಅಗ್ರೇಸರರಾದರು ಹಲವೆಡೆ ಭಸ್ಮಧಾರಿಗಳು ನಡೆಸುವಂಥ ಕಾರ್ಯಗಳು ಮಾತ್ರ ಬೂದಿಯಾಗಲಿಕ್ಕೆಂದೇ ಜನನವನ್ನು ಪಡೆದಿರುತ್ತವೆ.

ಜೇಕಕಡಿಯಲ್ಲಿ ನೆರಳು, ಬೆಳಕಿನ ಬಳಿ ಶಿಥಿಲಪದಾರ್ಥಗಳು, ನೀರ ಸಮೀಪ ಶೌಚ ಸಂಗಳು ಸೇರಿಕೊಳ್ಳುವಂತೆ ಭವಾರಿಸಿಸ್ಪರ್ಶ ಸಾಮೀಪ ದಲ್ಲೇ ಭ್ರಷ್ಟಾಚರಣೆಗಳು ಕೊಬ್ಬುತ್ತವೆ. ಶಿವನಾಮಾಸ್ಮೃತವಾದ ವಸತಿಗೃಹಗಳಲ್ಲಿ ತಗಣೆ ಮುಂತಾದವು ಗಳಿಂದಲು ಕೊಳ್ಳುವ ಅರ್ಥಾತ್ ಆಯುಷ್ಯವನ್ನು, ಶಕ್ತಿಗಳನ್ನು ಕಡಿಮೆಯಾಗಿ ಸುವ ಕ್ರಿಯೆಗಳು ಸಾಮಾನ್ಯವಾಗಿ ಅಧಿಕ ಪ್ರಮಾಣದಲ್ಲಿ ಜರಗಿರುತ್ತವೆ. ನವ ನಾಗರಿಕತೆಯಲ್ಲಿ ಘಟಿಸುತ್ತಿರುವ ಶೋಷಣೆಯು ದೈತ್ಯಾಕಾರಗಳ ಮುಂದೆ ಬ್ರಾಹ್ಮಣರಿಂದಾಗುವ ಶೋಷಣೆಯನ್ನು ಬೆಟ್ಟದಿದಿರು ಕಿರಿದಾಡಿಗೆ ತುಲನೆಯಾಗಿಸ ಬಹುದಷ್ಟೆ. ೪೬] ಯಾರಾವ ರೀತಿ ಜರಿದರು ಪ್ರತಿಭಟನೆಯನ್ನು ದೂರೈಸಿ, ತಲೆತಗ್ಗಿಸಿ ಸಹಿಸಿಕೊಳ್ಳುವುದನ್ನು ರೂಢಿಯಾಗಿಸಿರುವುದರಲ್ಲಿ ಭೂಸುರ ನಿಕರ ವನ್ನು ಮೀರಿದವರು ಈ ವರೆಗೆ ಬೇರಾವ ಜಾತಿ, ಧರ್ಮದವರಲ್ಲಿ ಕಾಣಿಸಿರುವ ಸಂಭವಗಳು ಅತೀವ ವಿರಳ. ೪೭] ಕೂದಲುಗಳು ಬೆಳ್ಳಗಾದ ಮೇಲು ಸಹ ಕೆಲವರು ಬೇರೆಯವರನ್ನು ತೋಳಲಾಡಿಸುವುದಕ್ಕಾಗಿಯೇ ತಮಗೆ ಶರೀರ ದೊರೆ ತಿರುವುದು ಎನ್ನುವ ದೃಷ್ಟಿಯಲ್ಲಿ ತುಸುವಾದರು ಹಂದಾಡದವರಾಗಿರುತ್ತಾರೆ. "ದೇಹವಿರುವುದು ಪರೋಪಕಾರಕ್ಕಾಗಿ" ಎನ್ನುವ ಶ್ರೇಷ್ಠ ಪರಂಪರೆಯನ್ನು ತಳೆದ ರಾಷ್ಟ್ರದಲ್ಲೇ ಸದ್ಯದ ಪರಿಸ್ಥಿತಿಗಳು ಹೀಗೆ. ೪೮] ಆಹಾರಗೃಹಗಳಲ್ಲಿ ಸಾಮಾನ್ಯವಾಗಿ ಮುಂಜಾನೆಯಿಂದಲು ಧನಲಾಭಗಳು ಪ್ರಾರಂಭವಾಗುತ್ತವೆ. ಅವುಗಳಿಗೆ ಹೊಂದಿಕೊಂಡು ವಸತಿಗೃಹಗಳಿರುತ್ತವೆ. ಅಲ್ಲಿ ಸರಿಯಾದ ವ್ಯವಸ್ಥೆಯುದೆ ಒಂದೇ ಬಾರಿಗೆ ಹತ್ತು ಜನರಿಗೆ ಬೇಕಾದರು ಸ್ನಾನದ ಚೀಟಿಗಳನ್ನು ನೀಡಿ ತಾಸುಗಟ್ಟಲೆ ಕಾಯಿಸಿ, ಸಮಯ, ಶಕ್ತಿಗಳನ್ನು ವಿಫಲಗೊಳಿಸುತ್ತಾರೆ. ಸರಕಾರೀ ಕಾರ್ಯಾಲಯಗಳಲ್ಲಿ ಜರಗುತ್ತಿರುವ ಮಾನವೀಯ ಸಾಮರ್ಥ್ಯಗಳ ನಿಷ್ಫಲೀಕರಣಗಳಿಗೆ ಸಮಾನವಾದ ದಾಖಲೆಗಳು ಬೇಗಿರುವೆಡೆ ಸಹ ಜನಿಸುತ್ತಿವೆಯೆನ್ನಿಸುತ್ತವೆ. ದೇಶದಲ್ಲಿ ಬಡತನ, ದುಃಖಾದಿಗಳ ವ್ಯಾಪ್ತಿಗೆ ಪ್ರಬಲವಾದ ಪಾಯಗಳನ್ನವು ನಿರ್ಮಿಸುತ್ತವೆ. ೪೯] ಇತರ ಮಾಧ್ಯಮಗಳೊಡನೆ ಪಟಚಿತರು, ಪಿತ್ರರು ಅಧಿಕವಾಗಿ ಅಸಗತ್ಯ ವಿಷಯಗಳನ್ನು ತುಂಬುತ್ತಿರುವುದೇ ಮನಗಳಲ್ಲಿ ದಣಿವು ಹೆಚ್ಚಿ ಅಪಘಾತಾದಿಗಳಿಂದು ಅಸಂಖ್ಯವಾಗಲು ಕಾರಣವಾಗುತ್ತಿವೆ. ೫೦] ಭಾಷೆ, ಧರ್ಮಗಳು ಜನಾಂಗಗಳ ಆಂತರಿಕ ಪರಿಪೂರ್ಣತೆಯನ್ನು ರೂಪಿಸುತ್ತವೆ. ಅವುಗಳ ಬಗ್ಗೆ ಗೌರವವನ್ನು ಕಳೆದು

ಕೊಂಡಿರುವವರು ಆತ್ಮಾಭಿಮಾನದಿಂದಲೇ ರಿಕ್ತರಾದವರೆಂದು ನಿರ್ಧರಿಸಬಹುದು. ಪ್ರತಿಯೊಂದು ಬಾರಿ ಸತ್ಸಹಕಾರವನ್ನು ಮುಂದೂಡುತ್ತ ಜನ್ಮಾಂತರವನ್ನೇ ಸೇರಿ ಸ್ಮೃತಿರಹಿತರಾಗುವವರು, ವಚನ ಮೂಲಕ ನಿರೀಕ್ಷೆ ಮೂಡಿಸಿ ನಿರಾಶೆಗೆ ತಳ್ಳುವ ಅಧಮರು ಹಾಗಾಗಿರುವರೆಂಬುದು ನಿಶ್ಚಯ. ಕೋತಿಗಳ ನಡುವೆ ಕೋಪ ಗಾಗದೆ ವಾರಣವಾಗಲು ಸಾಧ್ಯವಾಗದ ಪರಿಸ್ಥಿತಿಯಂತೆ ಎಲ್ಲ ರೀತಿಗಳಲ್ಲಿ ತಡೆ ಗಳನ್ನು ಹೆಚ್ಚಿಸಿ ಬುದ್ಧಿಜೀವಿಗಳನ್ನು ಸಹ ತಮ್ಮಂತಾಗಿಸಲು ಅವರೆಲ್ಲ ಪ್ರಯ ತ್ನಗಳನ್ನು ಗೈಯುತ್ತಾರೆ. ೫೦) ಪ್ರಯಾಣ ಪತ್ರಗಳ ಸಂಖ್ಯೆ, ದಿನಾಂಕ ಗಳನ್ನು ಬದಲಾಯಿಸುವುದೇ ಮೊದಲಾದ ಅಪ್ರಾಮಾಣಿಕ ಕಾರ್ಯಗಳಲ್ಲಿ ತಾರುಣ್ಯದಿಂದಲೇ ಪಳಗುವ ಹೊಸ ದೊರೆಗಳು ದೇಶಭಕ್ತಿ, ಸಮಾಜಾದರಗ ಳಿಂದ ವಿಮುಖರಾಗುತ್ತ ಚಾಳ್ವಿಯಲ್ಲಿ ಮುಂದರಿವಂತೆ ಸ್ವಾರ್ಥ, ಭ್ರಷ್ಟತೆಗಳಲ್ಲೇ ಪರಿಪುಷ್ಟರಾಗುತ್ತಾರೆ. ಮಿಕ್ಕ ಮನುಕುಲವ ಸದಸ್ಯರಂತೆ ವಿಶ್ವಮಾತೆಯ ಜಠ ರದಿಂದಲೇ ಆಹಾರಾದಿಗಳನ್ನು ತಾವು ಪಡೆಯುತ್ತಿರುವವರೆಂಬುದನ್ನು ಪರಿಗಣಿ ಸದೆ ಸೋದರರಿಡೆಗೇನೇ ಪ್ರಾರ್ಥಿಯಾದ ನಿರ್ಲಕ್ಷ್ಯವನ್ನು ತಾಳುತ್ತಾರೆ. ನ್ಯಾ ಯಕ್ರಮಗಳಿಗೆ ಸಿಲುಕಿದ ಬಾಹ್ಯಾಪರಾಧಿಗಳು ಚಿತ್ರಹಿಂಸೆಗಳಿಗೆ ಗುರಿಯಾಗು ತ್ತಿರುವುದನ್ನು ಕಂಡು ಬಹಳವಾಗಿ ಸಹಾನುಭೂತಿ ತೋರುವವರು ಕಟುಕನಿಗೆ ಕಟುಕನ ಬಗ್ಗೆ ಮಾತ್ರ ಕರುಣೆಯೆಂಬುದನ್ನು ಸಾಬೀತುಪಡಿಸುತ್ತ ಯಾರಿಗು ಸುಳಿವೊದಗದಂತೆ ಘೋರವಾದ ನೈತಿಕಾಪರಾಧಗಳಲ್ಲಿ ಕಾಲದಿಂದ ಕಾಲಕ್ಕೆ ಮಿಗಿಲಾಗುತ್ತಾರೆ. ಮತ್ತೆ ಬೆಕ್ಕಿನ ಕೊರಳಿಗೆ ಗಂಟೆ ಕಟ್ಟುವವರ್ಯಾರೆಂಬಂತೆ "ಹೇ ದೊರೆಗಳೇ, ತಾವು ಮಾತ್ರ ಒಗೆಗೊಂಡ ಬಟ್ಟೆಗಳನ್ನು ಧರಿಸಿದರೆ ಫಲ ವೇನು ? ತಾವು ಸಂಚರಿಸುವ ಜಾಗಗಳಲ್ಲಿ ಮಾಲಿನ್ಯಗಳಿದ್ದರೆ ಅವುಗಳ ಪ್ರಭಾ ವಗಳು ತಮಗೆ, ತಮ್ಮ ಕುಟುಂಬದವರಿಗೆ, ಮಕ್ಕಳಿಗೆ ತಾಗಬಹುದು. ಅನಾ ರೋಗ್ಯಕರ ಸ್ಥಿತಿಗಳು ತಟ್ಟಬಹುದು. ಗಾಳಿ, ನೀರುಗಳ ಮೂಲಕ ಅಶುದ್ಧಿ ಯುತವಾದ ಪರಿಸರದ ದುಷ್ಪರಿಣಾಮಗಳು ತಮ್ಮ ಶರೀರವನ್ನೇ ಹೊಗಬಹುದು. ಆದ್ದರಿಂದ ಸಾಮಾಜಿಕವಾದ ಹಿತದ ಬಗ್ಗೆ ಹೆಚ್ಚಿನ ಶ್ರದ್ಧೆ ತಮ್ಮಲ್ಲಿ ಮೈದಾಳ ಬೇಕು. ಅಧಿಕಾಧಿಕವಾಗಿ ವೇತನವನ್ನು ದೊರಕಿಸಿಕೊಂಡು ವಿವಿಧ ಸುಖ, ವಿಲಾಸಗಳಿಗೇನೇ ವ್ಯಯಿಸುತ್ತಿರುವ ನಿಲುವನ್ನು ಕೊನೆಗೊಳಿಸಬೇಕು. ಗಾಳಿ, ನೀರುಗಳಂತಹ ಮೂಲಭೂತ ವಸ್ತುಗಳು ಎಲ್ಲರಿಗು ಉತ್ತಮವಾಗಿ ಲಭ್ಯವಾಗ

ಬಿದ್ದಾಗ ಬೇಲಿಯೇ ನಮ್ಮ ಸ್ವಂತ ಸುಖಗಳನ್ನು ವಿಸ್ತರಿಸಿಕೊಳ್ಳುತ್ತಿರುವುದು ಇದಾವ ಮನುಷ್ಯತ್ವ? ಇದೆಂಥ ಘನನಾಗರಿಕತೆಯ ಲಕ್ಷಣ? ಹೀಗಿರುವ ವರ್ತನೆಗಳನ್ನು ಸಲಿಗೊಳಿಸಿರುವುದು ಅದೆಂಥ ಶಿಕ್ಷಣ?" ಎನ್ನುವ ವಿಚಾರಗಳನ್ನು ಇವರ ಮುಂದೆಯೊಳಕ್ಕೆ ಹೊಗಿಸುವುದು ಸುಲಭಸಾಧ್ಯವಾಗುವ ಕಾರ್ಯವೆ?

೩೧) ಒಂದು ರೀತಿಯಲ್ಲಿ ತಗಣೆಯೇ ಮಾನವನಿಗಿಂತ ಶ್ರೇಷ್ಠವಾದ ಜೀವಿಯೆನ್ನಿಸುತ್ತದೆ. ಕಾರಣ, ಅದು ಅವಲಂಬಿತ ಕಾಯದ ರಕ್ತವನ್ನು ಹೀರುತ್ತಿರುವುದು ಕೇವಲ ಬಾಳ್ವಿಗಾಗಿಯೇ ಹೊರತು ಯಾವುವೇ ವಿಲಾಸೋದ್ದೇಶಗಳ ಪೂರೈಕೆಗಾಗಿಯಲ್ಲ. ಆದರೆ ಮನುಷ್ಯ ಆ ರೀತಿಯಲ್ಲಿ ವಿಪರೀತವಾಗಿ ಗೈಯುತ್ತಿದ್ದಾನೆ. ತನ್ನ ಸ್ವಾರ್ಥಾಧಿಕ್ಯಕ್ಕಾಗಿ ಸಮಾಜದ ಸುಖಗಳನ್ನೇ ಹಿಂಡುತ್ತಿದ್ದಾನೆ. ಪ್ರಕೃತಿಯ ರಕ್ತ, ಮಾಂಸಗಳನ್ನೇ ಭಕ್ಷಿಸುತ್ತ ವೈಭವೋಪೇತವಾದ ಜೀವನವನ್ನು ನಡೆಸಿದ್ದಾನೆ. ದೊಡ್ಡ ಮೀನು ಸಣ್ಣ ಮೀನನ್ನು ನುಂಗಿತೆಂಬ ರೀತಿಯಲ್ಲದಿದ್ದರು ಅನಿಯಂತ್ರಿತ ಹಿರಿತಗಣೆ ತಾನಾಗಿದ್ದು ಕಿರುತಗಣೆಯನ್ನು ದೂಷಿಸುತ್ತಿರುವುದರಲ್ಲಿ ತನ್ನ ಮದಸಂಕೀರ್ಣತೆಯನ್ನು ತಣಿಸುತ್ತಿದ್ದಾನೆ.

೩೨) ಸದ್ಯ ದೇಶದಲ್ಲಿರುವುದು ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲ, ಮಾನವರಿಂದ ಮಾನವರಿಗಾಗಿಯೇ ರಚಿತವಾಗಿರುವಂಥ ಚಿಲ್ಲರೆ ಪ್ರಭುತ್ವವೆಂಬುದನ್ನು ಪ್ರಚಲಿತ ಸನ್ನಿವೇಶಗಳು ಪ್ರಬಲವಾಗಿ ಪ್ರಮಾಣೀಕರಿಸುತ್ತಿವೆ. ವ್ಯವಹಾರದ ಯಾವ ಜಾಗಕ್ಕೆ ಹೋದರು "ಚಿಲ್ಲರೆ ಬೇಕು, ಚಿಲ್ಲರೆ ಕೊಡಿ" ಎನ್ನುವ ಕೂಗು. ದೊಡ್ಡ ಮೊತ್ತದ ವಿತ್ತಾಂಕಗಳೆಲ್ಲ ಒಳಗಿಂದೊಳಗೆ ದುಷ್ಟರುಗಳ ಸಂತೃಪ್ತಿಗೆ, ದುಷ್ಕಾರ್ಯಗಳ ಪೂರೈಕೆಗಾಗಿ ಬೇತಾಳನಾಟ್ಯಗಳನ್ನು ನಡೆಸುತ್ತಿವೆಯೇನೋ. ಚಿಲ್ಲರೆ ರಾಶಿಗಳೆಲ್ಲ ಪವಿತ್ರ ನದಿಗಳ ತಳಗಳಲ್ಲಿ ಸಂಗ್ರಹವಾಗಿವೆಯೇನೋ ಸಂಶಯ. ಅವುಗಳ ಬಗೆಗೀಗ ಸುತ್ತಿ, ಸುತ್ತಿ ಜನರೆಲ್ಲ ಚಿಲ್ಲರೆ ದೊರೆಗಳಾದರು. ಚಿಲ್ಲರೆಗಳಿಗೇನೇ ಬಾಳ್ವೆಯಲ್ಲಿ ಇಷ್ಟೊಂದು ಪ್ರಭುತ್ವ ದೊರಕಿದುದಾದರೆ ದೊಡ್ಡನ ವಿತ್ತಾಂಕಗಳು ಯಾವ ರೀತಿ ಸ್ವೇಚ್ಛೆಯಿಂದ ಕ್ರೀಡೆಗಳಲ್ಲಿ ಮಗ್ನವಾಗಿರುತ್ತವೋ ನೆನೆಯಲಾಗುವುದಿಲ್ಲ. ನವನಾಗರಿಕತೆ ಪ್ರಜೆಗಳಿಗೆ ಪೂರ್ತಿಯಾಗಿ ಲಕ್ಷ್ಮೀದಾಸ್ಯವನ್ನೇ ಮೂಡಿಸಿದಂತಾಯಿತು. ಜನರು ತಮ್ಮ ಮನಗಳಲ್ಲಿ ಹುದುಗಿರುವ ಚಿಲ್ಲರೆ ನಿಲುವುಗಳಿಗೆಲ್ಲ ಬಾಹ್ಯ ರೂಪಗಳನ್ನು ನೀಡಿ ಅವನ್ನು ಹೊರತಂದು

ಸಮಾಜಕ್ಕೀಯುವ ಪ್ರಚಂಡರಾಗಿದ್ದರು ಈಗಿನ ತೊಂದರೆ ಮಾತ್ರ ನಿವಾರಿಸಲು ಶಕ್ತರಾಗಲಿಲ್ಲ. ಮುಂಕಣ್ಣಿನಂಥವರಿಲ್ಲ ನಿಷ್ಪ್ರಯೋಜಕರೆನ್ನಿಸಿದರು ಅರುವತ್ತು ಕೋಟಿಗು ಮಿಗಿಲಾದ ಪ್ರಜೆಗಳ ಬೀಡಾದ ಬೃಹತ್ತರ ರಾಷ್ಟ್ರವೊಂದರಲ್ಲಿ ಎಷ್ಟೋ ಸಮಯ ದಾಟಿದರು ಚಿಲ್ಲರೆಗಳ ಮುಗ್ಗಟ್ಟನ್ನು ದೂರೈಸಬಲ್ಲ ಸೂಕ್ತವಾದ ಸಲಹೆಯನ್ನು ಸರಕಾರಕ್ಕೀಯುವ ಯಾವೊಬ್ಬ ಬುದ್ಧಿಜೀವ ಕೂಡ ಶ್ವಾಸವನ್ನು ತಳೆದಿಲ್ಲವೆಂಬುದನ್ನು ವೀಕ್ಷಿಸುವಾಗ ಆಶ್ಚರ್ಯ ಜನಿಸುತ್ತದೆ. ಧರ್ಮವನ್ನೇ ಪ್ರಧಾನವಾಗಿಸಿಕೊಂಡು ಬಾಳುತ್ತಿದ್ದ ವ್ಯಕ್ತಿಗಳಿಗೆ ಗೋದಾನ, ಭೂದಾನಾದಿಗಳನ್ನು ಸಲ್ಲಿಸುತ್ತಿದ್ದ ಕಾಲಗಳಿದ್ದುವು. ನವನಾಗರಿಕತೆ ಅವನ್ನೆಲ್ಲ ತೊರೆದು ಅಲ್ಪ ಚಿಲ್ಲರೆಗಳಿಂದವರನ್ನು ಸಂತೃಪ್ತಗೊಳಿಸತೊಡಗಿತು. ಅಲ್ಲಿಲ್ಲಿ ಸರಕಾರ ಆ ಬಗ್ಗೂ ತನಿಯುಂಟಾಗುತ್ತಿತ್ತು. ಜೊತೆಗೀಗ ಚಿಲ್ಲರೆಗಳಿಗೂ ಅಧ್ವಾನ ತಟ್ಟಿತು. ಅಲ್ಲ ಪ್ರಭುಗಳೇ, ನೀವೇ ನೋಡಿ "ಚಿಲ್ಲರೆ ಕೊಟ್ಟು ಸಹಕರಿಸಿ" ಎಂದು ಎಲ್ಲ ಕ್ಷೇತ್ರಗಳವರು ಒಂದೇ ಸಮನೆ ಬೊಬ್ಬಿರಿಸುತ್ತಿದ್ದಾರೆ. ಅಂಥ ಸ್ಥಿತಿಗಳಲ್ಲಿ ಘಾಸಿಯೇ ಬಾರದ ರೀತಿ ಹೆಚ್ಚಿನ ಮೊತ್ತದ ವಿತ್ತಾಂಶಗಳನ್ನು ಒಂದೇ ಸಮನೆ ನೀವವರಿಗೆ ಕೊಡುತ್ತಿದ್ದೀರಲ್ಲ. "ಇಂಥವರಿಗೆ ಚಿಲ್ಲರೆ ಮಾತ್ರವೇ ಕೊಡುವುದು ಸರಿ.ಹೆಚ್ಚಿನ ಹಣವನ್ನೀಯಲೇಬಾರದು" ಎನ್ನುವಂಥ ಬುದ್ಧಿ ನಿಮ್ಮಲ್ಲಂಕುರಿಸಬಾರದಾ? ಧನವೇ ಹೆಚ್ಚಾದ ಹಾಗೆ ಹೀಗೆ ವರ್ತಿಸುತ್ತಿರುವ ನಿಮ್ಮ ಸುತ್ತಣವರಿಗೆ ಇಂಥ ರೀತಿ ತ್ಯಜಿಸಿ ಸತ್ಕಾರ್ಯಗಳಿಗಾಗಿ ಯಾಚಿಸಲು ಬರುವವರಿಗೆ ಈ ತೆರ ಸಹಕಾರವೀಸಗಲೆಂದು ಬಲ್ಲಿದರಾದ ನೀವಾದರು ಸ್ವಲ್ಪ ತಿಳಿಸಿಕೊಳಲಾರಿರ? ೫೩) ಒಟ್ಟಿನಲ್ಲಿ ಮೊದಲೇ ಸಾಮಾನ್ಯ ಪ್ರಮಾಣಗಳಲ್ಲಿ ಚಿಲ್ಲರೆಗಳನ್ನು ನುಂಗುತ್ತ ಉತ್ಸಾಹೋಪೇತರಾಗುತ್ತಿದ್ದ ಹುಂಡಿಗಳ ಪ್ರಭೃತಿಗಳಿಗೆ ಮಹತ್ತ್ವವಾದವಲ್ಲದನ್ನು ನಿರಮೀಸುತ್ತ ಸಾಧಾರಣ ವೇತನವಿದ್ದರು ಘನಘನವನ್ನೇ ಕಟ್ಟಿಸಿಕೊಂಡು ಮೆರೆಯಲು ಹೊಸತೊಂದು ಮಾಧ್ಯಮ ದೊರಕಿದಂತಾಗಿದೆ ಪ್ರಸ್ತುತ ತಾಪತ್ರಯದಿಂದ. ಸರಕಾರೀ ಕ್ಷೇತ್ರಗಳಲ್ಲಿ ಪ್ರಯಾಣದರ, ಶುಲ್ಕಾದಿ ನೀಡಿಕೆಗಳನ್ನು ಪಡೆಯುತ್ತಿರುವುದೇ ಕೆಲಸವಾಗಿರುವವರು ಹಲವೆಡೆ ಹಿಗ್ಗು, ಸುಗ್ಗಿಗಳ ಶಿಖರಕ್ಕೇರಿದ್ದಾರೆ. ೫೪) ವಿವಿಧ ಕ್ರಮಗಳು ಪ್ರತಿಫಲಾಂತರಗಳನ್ನು ತಳೆದಿರುವ ಬಗ್ಗೆ ಯಾವುದೇ ವೈಪರೀತ್ಯವಿಲ್ಲದಿದ್ದರು ಹಾಗೆಸಗಿರುವ ಸದ್ಯದ ಪ್ರವೃತ್ತಿ ರಾಕ್ಷಸಾಕಾರದ ಸಮಸ್ಯೆಗಳನ್ನು ಜನಿಸುವುದಕ್ಕೆ ಹಚ್ಚಿಸಿದೆ.

ಕೆಲವು ಸಮೂಹಗಳ ವಿಭವಗಳು ಬಹುಮಂದಿಗಳನ್ನು ಮೇಲೇಳಲಾರದ ದುಃಖ
ದಾರಿದ್ರ್ಯಗಳಿಗೆ ತುಳಿದು ಭೂತನರ್ತನಗಳಲ್ಲಿ ಮಗ್ನವಾಗಿವೆ. ಮಿತಿರಹಿತವಾದ
ದುರ್ವಿಷಯಗಳ ಗೊಂದಲಗಳಲ್ಲಿ ತನ್ನ ಹಿತವೆಂದರೇನು ? ಅದರ ಬಗ್ಗೆ ಯಾ
ವುದಕ್ಕೆ ತಾನು ಸಹಕಾರ ಸಲ್ಲಿಸಬೇಕು, ಯಾವುದರೆಡೆಗೆ ಸಹಕರಿಸಬಾರದು
ಎನ್ನುವಂಥ ವಿವೇಕಾನ್ವಿತವಾದ ಪ್ರಜ್ಞೆಯನ್ನೇ ಮಾನವನಿಂದು ಕಳೆದುಕೊಂಡವ
ನಂತೆ ವರ್ತಿಸುತ್ತಿದ್ದಾನೆ. ಇಂಥ ಸ್ಥಿತಿಗಳಲ್ಲಿ "ಹೊತ್ತು ಹೊತ್ತೂಟವಿಲ್ಲದೆ |
ಎಷ್ಟು ರಾತ್ರಿಯ ಹಸಿದು ಕಳೆದೆಯೋ | ಎಷ್ಟು ಸಂಕಟವುಂಡೆಯೋ" ಎನ್ನು
ವಂಥ ಪಾಡುಗಳು ಉದ್ಧಾರಾಕಾಂಕ್ಷಿಗಳಿಗೆ ಸಾಧಾರಣವೆನ್ನುವಂತಾಗಿದೆ.
"ಭಿನ್ನಭಿನ್ನತ ತೀಯೆ ನೀನಿ | ನ್ನೆನ್ನ ಬಾಳ್ವೆಗೆ ನಿನ್ನನುಳಿದಾ | ರನ್ನು ನೋಡೆ
ನು ಮೋಹ ದಿಟ್ಟಿಲಿ ನಿರತ ನಿಶ್ಚಯವು | ನಿನ್ನ ಪಾಲಿಪ ಹೊಣೆಯು ತಾಳಿದೆ |
ಬನ್ನ, ಸೊಗದೆಡೆಯಲಿ ನೀ ಸಖಿ | ಯೆನ್ನುತರಿವೆನು ಬೆಂಕಿಯೊಡೆಯನೆ ಸಾಕ್ಷಿ
ಯಿದಕಿರುವ || ಜೀವ ಕೋರುತಲಿಹೆವು ವರಗಳ | ಭಾವದಲಿ ನೆಲಸಿರಲಿ
ನಲ್ಮೆಯು | ತೀವಿರಲಿ ಗುಣಸಹನೆ ಸಂಪದ ಯೋಗ್ಯರಾಗಿರುತ | ನೋವ ತಾರ
ದ ಪುಕ್ಕಳೊಡಗಲಿ | ಪಾವನಾಗಿಹ ಮೋದ ಶಾಂತಿಗೆ | ನಾವೆ ಬದುಕಿನ
ಧ್ಯೇಯ ಲಕ್ಷ್ಯವ ಸಾಧಿಸಲಿ ಸರಣಿ ||[1] ಎಂಬಂತಹ ಲಗ್ನಾಂತರ್ಗತವಾದ ಧ್ಯೇ
ಯಗಳನ್ನು ನೀಚಾಲಯಗಳಲ್ಲಿ ಮಾರುವವರು, ಒತ್ತೆಯಿರಿಸುವವರು, ನುಚ್ಚು
ನೂರಾಗಿಸಿ ಕುಣಿದು ಕುಪ್ಪಳಿಸುವವರು ಸತ್ಸಹಕಾರದಂಥ ಸಾಮಾನ್ಯ ಕರ್ತವ್ಯ
ಗಳ ಬಗ್ಗೆ ಯಾವ ರೀತಿ ನೀಡಿದ ವಚನಗಳನ್ನು ಮುರಿಯುತ್ತಿದ್ದಾರೆ, ನಾಗರಿ
ಕತೆ, ಸಂಸ್ಕೃತಿಗಳನ್ನು ಯಾವ ಕಡೆಗೆ ಸಾಗಿಸುತ್ತಿದ್ದಾರೆಂಬುದರ ವಿವರಣೆ ಬೇಕಾ
ಗದು. ಸಕ್ಕರೆಯೆ ಬಿಸವಾಗಿ ಬದಲಿತು | ಚೊಕ್ಕ ಸಾಗರ ಬಾನುವೆಲ್ಲವು |
ಮಿಕ್ಕ ಹಿಂಸೆಯು ರಂಗನಾಡಿತು ಹುಯ್ಯಲೆಬ್ಬಿಸುತ | ಹೊಕ್ಕ ಹೊಕ್ಕೆಡೆ ಮನ
ವು ದುಃಖದ | ನೊಕ್ಕಲಾಗಿಹ ಶತ್ರು ಸಂಗದಿ | ಧಿಕ್ಕರಿಸುತಿದೆ ಸತ್ಯ, ಧರ್ಮವ
ನಾಗರಿಕತೆಯಿಡುವೆ || xxx) ಮೊದಲು ಜನರಲ್ಲಿ ಸಾಹಿತ್ಯಾದಿಗಳ ಬಗ್ಗೆ
ಅಷ್ಟಿಷ್ಟಾದರೂ ಅಭಿಮಾನವಿರುತ್ತದೆ. ಆದರೆ ಅಭಿಮಾನಿಗಳ ಸಂಘವೊಂದು
ಹುಟ್ಟಿಕೊಂಡಿತೆಂದರೆ ಹಾಗಿರುವವರೆಲ್ಲ ಅದರಲ್ಲಿ ಸೇರಿಕೊಳ್ಳುತ್ತಾರೆ. ಮತ್ತೆ
ಹೆಚ್ಚಿನ ಗೌರವ, ಸೌಕರ್ಯಗಳಿಂದ ಕೂಡಿದ ಕಾರ್ಯಪರ್ತಿ, ಅಧ್ಯಕ್ಷರ ಪದವಿ
ಡೆಗೆ ಸಾಮಾನ್ಯವಾಗಿ ಹೆಚ್ಚಿನವರ ಲಕ್ಷ್ಯ ಸರಿಯತೊಡಗುತ್ತದೆ. ಪದಾಧಿಕಾರಿ

ಗಳು ಸ್ವಾರ್ಥಕ್ಕಾಗಿ ಹೇಗು ಸಂಸ್ಥೆ ನಡೆಸಲು ಅಧಿಕವಾದ ಧನಸಂಗ್ರಹವನ್ನು ಮುಖ್ಯವಾದ ಗುರಿಯಾಗಿಸಿಕೊಳ್ಳುತ್ತಾರೆ. ಹೀಗಿರುವ ಗೊಂದಲಗಳ ಮಧ್ಯೆ ನಿಜವಾದ ಅಭಿಮಾನವೆಂಬುದು ನೆಗೆದು ತಿಪ್ಪೆಗುರುಳಿರುತ್ತದೆ. ೫೬) ಹೊಸ ಬರೇನಾದರು ಮಾತಾಡಿದರೆ ವ್ಯವಹಾರಾತೀತ ವಿಷಯಗಳಲ್ಲಿ ಪೇಟೆಯವರು ಹಳ್ಳಿಯವರ ರೀತಿ ಸಾಮಾನ್ಯವಾಗಿ ಸುಳ್ಳಾಡುವುದಿಲ್ಲ. ಹಾಗೇನಾದರು ಗೈದರೆ ತಮ್ಮ ನೆರೆಯಲ್ಲಾತ ನೆಲಸಿರುವವನಾಗಿ ತೊಂದರೆಯುಂಟಾದೀತೆನ್ನುವ ಭಯ ಅವರಿಗಿರುತ್ತದೆ. ಆ ತೆರದಂಜಿಕೆ ಗ್ರಾಮಸ್ಥರಿಗಿರದೆ ತಮ್ಮ ವಿಕಾರಗಳಿಗೊಂದು ವಿನೋದವೆಂಬಂತೆ ವಿಚಾರಿಸಿದವರನ್ನು ಹಲವು ಬಾರಿ ಅಬದ್ಧಗಳೊಡನೆ ದಿಕ್ಕೆಡಿಸುವುದಿದೆ. ನೆಲೆ ಮುಂತಾದುವನ್ನು ದೃಢಪಡಿಸಿಕೊಂಡ ಬಳಿಕವೇ ವ್ಯಾಪಾರಸ್ಥರು ಗ್ರಾಹಕರನ್ನು ಐಚ್ಛಿಕ ವಂಚನೆಯ ಪ್ರಕರಣಗಳಿಗೆ ಗುರಿಯಾಗಿಸುವುದು ಸಾಮಾನ್ಯ. ೫೭) ಕಾರ್ಯಾಲಯಗಳಲ್ಲಿ ಬರೆಯುವುದರಲ್ಲಿ ಮಗ್ನರಿರುವ ಶಿಕ್ಷಿತರನ್ನು ಹಳ್ಳಿಗನೊಬ್ಬ ಕುತೂಹಲದ ದೃಷ್ಟಿಯೊಡನೆ ನಿರುಕಿಸುವ ರೀತಿಯಲ್ಲೇ ಪ್ರಯಾಣಾದಿ ಕಾಲಗಳಲ್ಲಿ ಯಾರಾದರೊಬ್ಬ ಏನಾದರು ಬರೆಯುತ್ತಿದ್ದರೆ ವಿದ್ಯಾವಂತರೇ ವಿಸ್ಮಯಾನ್ವಿತವಾಗಿ ಸುತ್ತೆಡೆಯಿಂದ ನಿಟ್ಟಿಸಲಾರಂಭಿಸುತ್ತಾರೆ. ಇಂಥ ರೀತಿ ಗ್ರಾಮೀಣರಿಗಿಂತ ಅವರ ಮಿದುಳು ಯಾವ ರೀತಿಯಲ್ಲು ಅಧಿಕವಾಗಿ ಬಲಿತಿಲ್ಲ, ಹೆಚ್ಚಿನ ಪ್ರತಿಫಲಗಳ ಪಾತ್ರತೆಯನ್ನವರಿಗೆ ನೀಡಬೇಕಾದ ಅನಿವಾರ್ಯತೆಯಿಲ್ಲವೆಂಬುದನ್ನು ಸ್ಪಷ್ಟಪಡಿಸುತ್ತದೆ. ೫೮] ತಾವು ರಾಷ್ಟ್ರ ಮಟ್ಟದ ಉದ್ಯೋಗ ಕ್ಷೇತ್ರದಲ್ಲಿರುವರಾಗಿ ರಾಷ್ಟ್ರಭಾಷೆಯನ್ನು ಮಾತ್ರವೇ ಮಾನಿಸಿಯೇವು, ನಾಡನುಡಿಯೆಂದರೆ ತಮಗೆ ಬರೀ ಕಸದಂತೆನ್ನುವ ಭಾವನೆ ಕೇಂದ್ರ ಸರಕಾರದ ಹೆಚ್ಚಿನ ನೌಕರರಲ್ಲಲ್ಲ ತಪ್ಪಿದೆ ಪ್ರಭುಗಳ ಸುಪ್ತಪ್ರಜ್ಞೆಗಳಲ್ಲಿ ಬಲವಾಗಿ ಹೂತಿರುವುದು ಮಂಕಣ್ಣನ ನೈಜಾನುಭವವಲ್ಲದೆ ಕಲ್ಪನೆಯ ಮಾತಾಗಿರಲಿಕ್ಕಿಲ್ಲ. ೫೯] ಬಹಳ ದಣಿವಾಗಿದ್ದುದರಿಂದ ಅರಸೀಕೆರೆಯ ಉಪಹಾರಗೃಹವೊಂದರಲ್ಲಿ ಮಂಕಣ್ಣ ಹಾಲು ತರಲು ಹೇಳಿದ. ಅನೇಕ ಬಾರಿ ದರದ ಕುರಿತೊತ್ತಿ ತಿಳಿಸಿದಾಗ ವಿತರಕನ ಸಹಾನುಭೂತಿ ಕಂಡು ಸ್ವಲ್ಪ ತಗ್ಗಿಸಲು ಕೋರಿದ. ಹಾಲೇ ಬರಲಿಲ್ಲ. ಊರಾವುದೆಂದು ಹೊರಗೊಬ್ಬನ ಪ್ರಶ್ನೆ. "ಊರೆಲ್ಲ ಹಣವಿದ್ದರೆ ಸ್ವಾಮಿ. ಅದಿಲ್ಲದ್ದಿದ್ದರೆ ನೀರಾದರು ಸಿಗಲಿಕ್ಕಿಲ್ಲ. ಮತ್ತೇನೂರೆ ಸಂಗತಿ ?" ಅಂದ. ೬೦] "ಯಾವೂರು ?" ಎಂದು ಬಳ್ಳಾರಿಯ

ಮೃಗಾಲಯದ ಹತ್ತಿರ ನನ್ನನ್ನೊಬ್ಬ ಕೇಳಿದ. “ಊರೂ ಇಲ್ಲ, ಸಾರೂ ಇಲ್ಲ. ಹಣ ಸಿಗಲಿಲ್ಲವೆಂದರೆ ಸುತ್ತ ಸಾವಿರ ಮಂದಿಗಳಿದ್ದು ಸಹ ಮನುಷ್ಯನಿಗೂಟಕ್ಕೇ ಗತಿಯಿಲ್ಲ. ಮೃಗಗಳ ನಿರಂತರ ಸಂಗದಿಂದಾಗಿ ಜನರಲ್ಲಿ ಭಾಷೆ, ದೇಶ, ಸಂಸ್ಕೃತಿಗಳ ಬಗ್ಗೆ ನಲ್ಮೆಯೇ ಬತ್ತಿಹೋಗಿದೆ. ಇಂಥ ಸ್ಥಿತಿಗಳಲ್ಲಿ ನನ್ನೂರು ಕಟ್ಟಿಕೊಂಡು ನೀನೇನು ಗೈತೀಯಪ್ಪ ?” ಅಂದೆ. ೬೧] ಶಿರಾದ ವಸತಿಗೃಹವೊಂದರಲ್ಲಿ ಶಯನಿಸಿದ್ದ ಮಂಕಣ್ಣ. ನಡುವೊಮ್ಮೆಚ್ಚರವಾಯಿತು. ಇದಿರುಗಡೆ ನೋಡಿದರೆ ತನ್ನನ್ನೇ ನಿಟ್ಟಿಸುತ್ತ ಯಾವನೋ ಪವಡಿಸಿದ್ದಾನೆ. ತಾನು ತಳೆದಿದ್ದ ಹೊದಿಕೆ ಆತನ ಸಮೀಪದಲ್ಲಿದೆ. ಕೈಗೆ ಬಂದ ತುತ್ತನ್ನು ಕಾಗೆಯಾದರು ಕಸಿದುಕೊಳ್ಳುವುದಿಲ್ಲ. ಆದರೆ ಮನುಷ್ಯರ ಮಧ್ಯೆ ಹಾಗಿರುವ ಸಂದರ್ಭಗಳೂ ಬರುತ್ತವೆ. ವ್ಯವಸ್ಥೆ ನೋಡಿಕೊಳ್ಳುತ್ತಿದ್ದವನನ್ನು ಕರೆದು ತೋರಿದ ಮೇಲೆಯೇ ಮರಳಿಯದು ದೊರೆತುದು. ೬೨] ಅಲ್ಪಸಂಖ್ಯಾತರಲ್ಲಿ ಆಚರಣೆಗಳಿಗಿರುವ ಪಾಶಸ್ತ್ಯಗಳು ಮುಂದರಿದಿರುತ್ತವೆ. ಮೊಹಮ್ಮದೀಯ ಗುರುಗಳು ನಸುಕಿನಲ್ಲೇ ಪ್ರಾರ್ಥನೆ ತೊಡಗುವುದನ್ನು ನಾವೀಗಲು ವೀಕ್ಷಿಸಬಹುದಾಗಿದೆ. ಬ್ರಾಹ್ಮಣರಲ್ಲಿ ಮಾತ್ರ ಹಾಗಿರುವ ಗುಣಗಳು ಸಾಮಾನ್ಯವಾಗಿ ನಷ್ಟವಾಗಿರುವುದು ನವನಾಗರಿಕತೆಯ ದುಷ್ಪ್ರಭಾವಗಳಿಂದಾಗಿ. ೬೩] ಧನಾಲಯದ ಸೇವೆಯಲ್ಲಿದ್ದಾಗ ಮಂಕಣ್ಣನ್ನೊಮ್ಮೆ ಮನೆಗೆ ಬೀಗ ಜಡಿದು ಯಾತ್ರೆಗೆ ಹೋಗಿದ್ದ. ನಾಲ್ಕು ಹೆಜ್ಜೆ ದೂರದಲ್ಲೇ ಬ್ರಾಹ್ಮಣರ ಮನೆಯಿದ್ದರು ಹಿಂಬರುವಷ್ಟರಲ್ಲಿ ದೊಡ್ಡ ಕಳವೇ ಜರಗಿತ್ತು. “ಅಪ್ಪಿತಪ್ಪಿ ಹೊಲೆಯರಲ್ಲಾದರು ತುಸು ಸಹಾನುಭೂತಿಯಿರಬಹುದು. ಆದರೀ ಬ್ರಾಹ್ಮಣರು ಮಾತ್ರ ನೆರೆಯವನಿಗೇನೇ ಅದೆಂಥ ದುಃಖವೊದಗುತ್ತಿದ್ದರು ಅದಾತನ ಪ್ರಾರಬ್ಧವೆಂದು ತಿಳಿದಾರೇ ಹೊರತು ಮರೆತಾದರು ತಡೆಯಲು ಮುಂಬರಲಿಕ್ಕಿಲ್ಲ. ಆದ್ದರಿಂದ ತಮಗಾವುದೇ ಭಯವಿಲ್ಲ” ಎಂಬುದು ಕಳ್ಳರಿಗೂ ಧೈರ್ಯ ಹೆಚ್ಚಿಸಿತೇನೋ. ೬೪] ಮನುಷ್ಯನಾವುದೇ ವಿಧಾನಗಳಿಂದ ವಿತ್ತಾರ್ಜನೆ ಗೈದರು ಸತ್ಕಾರ್ಯಗಳಿಗದನ್ನು ನೀಡಿದರು ಖಂಡಿತವಾಗಿಯದು ಸದ್ಗುಣವೆನ್ನಿಸಿಕೊಳ್ಳುತ್ತದೆ. ಸಮಾಜದ ಸಮ್ಮತಿಯಿರಲಿ, ಇರದಿರಲಿ, ಬೇರೆಯವರ ಶರೀರ, ಮನಸ್ಸುಗಳಿಗೆ ಅಥವಾ ತನ್ನವುಗಳಿಗೇನೇ ಹಾನಿಯುಂಟಾಗಿಸಿಕೊಂಡು ವ್ಯಕ್ತಿಯೊಬ್ಬ ಗೈಯುವ ಸಂಪಾದನೆ ನೀಚವೆನಿಸಿಕೊಳ್ಳಬಹುದು. ಸಮೂಹ ತನ್ನ ಸಂಪತ್ತುಗಳಿಂದ ನಡೆಸುತ್ತಿರುವ

ಪರ್ಯಾಯದ ಸ್ತೋತ್ರಗಳೆಂದು ಅವನ್ನು ನಾವು ಪರಿಗಣಿಸಬಹುದು. ಹಾಗಿದ್ದರು ವ್ಯಕ್ತಿ ಮುಂದಾದರವನ್ನು ಸತ್ಕಾರ್ಯಗಳಿಗೆ ಬಳಸುವುದರಿಂದ ತನ್ನ ಗುಣವನ್ನು ವ್ಯಕ್ತಗೊಳಿಸಬಹುದು. ಸಮಾಜ ಮತ್ತು ವ್ಯಕ್ತಿಗಳ ಹೊಣೆಗಳು ಹಾಗು ವ್ಯಯಭೇದಗಳನ್ನು ತಿಳಿಯದವರು ತಮ್ಮ ನಡುವೊಬ್ಬ ಭ್ರಷ್ಟ ವಿಧಾನಗಳಿಂದ ಶೋಷಣಾನ್ವಿತ ವಿಕ್ರಮಗಳಿಂದ ಸಂಪತ್ತನ್ನು ಹೆಚ್ಚಿಸಿಕೊಂಡು ಸತ್ಕಾರ್ಯಗಳ ಬಗೆಗವನ್ನು ಸಲ್ಲಿಸತೊಡಗಿದಾಗ ಆ ಕುರಿತಾಗಿಯು ದೂಷಿಸುವುದರಲ್ಲಿ ಮಗ್ನರಾಗುತ್ತಾರೆ. ಇಂಥ ಸಂದರ್ಭಗಳಲ್ಲಿ ಆತನ ಗಳಿಕೆಯ ದಾರಿಗಳಷ್ಟೇ ದೋಷಾನ್ವಿತವಾದುವು ಹೊರತು ವ್ಯಯಗಳದ್ದಲ್ಲವೆಂಬುದನ್ನು ಅವರು ಗಮನಿಸಬೇಕಾದುದು ಅತ್ಯಗತ್ಯವಾಗಿದೆ. ೬೫] ಬಚ್ಚಲಿನ ರೊಚ್ಚಿಯಂತಹ ನೀಚ ಪ್ರವೃತ್ತಿಗಳು ಪಟ್ಟಣಿಸಿರುವ ವಾತಾವರಣದಲ್ಲಿ ಪರಮ ಸುಗಂಧ ದ್ರವ್ಯಗಳನ್ನು ತಂದು ಸಿಂಪಡಿಸಿದ ಹಾಗೆ, ಮಲಿನಪದಾರ್ಥಗಳನ್ನೇ ತಿಂದು ತಿಂದು ಸಹಜಸ್ವಭಾವಗಳನ್ನೇ ಕಳೆದುಕೊಂಡಿರುವವರ ಹೃದಯಕ್ಕೆ ಮರಳಿ ಮಧುರಾನ್ನಗಳನ್ನು ಬಡಿಸಿದಂತೆ ಪೂರ್ತಿಯಾಗಿ ಪರಿಸರವನ್ನೇ ಬದಲಿಸುವಂಥ ಸತ್ಪರಿಣಾಮಗಳ ನವಕುಸುಮಗಳನ್ನು ವಿಕಸಿಸುವ ಶ್ರೀ ಸುಬ್ರಹ್ಮಣ್ಯ ಮಠಾಧೀಶ್ವರರಂಥವರ ಧ್ವನಿಗಳಿಗೆ ಅಮರತೆ, ವ್ಯಾಪಕತೆಗಳನ್ನು ಸಲ್ಲಿಸಿರುವುದು ನೂತನ ವಿಜ್ಞಾನದ ಮಹತ್ತರವಾದ ವಿಕ್ರಮವೆನ್ನಿಸಿಕೊಂಡೀತೆಂಬುದು ನಿಶ್ಚಯ. ಆದರೆ ಇಂಥವುಗಳ ಜತೆ ಹಾಗು ಹಿನ್ನೆಲೆಗಳಲ್ಲಿ ವಿಪುಲ ಸದ್ರವಗಳಿಗೆ ಸಮರ್ಪಕವಾದ ಪರಿಪೋಷಣೆಯನ್ನೀಯದೆ ಮೊಳಕೆಯಲ್ಲೇ ಕುಂದಿ, ಕಂದಿ ಮೃತವಾಗುವಂತವನ್ನು 'ಗೈಯುತ್ತಿರುವ ಮಾನವತ್ವಕ್ಕೇನೇ ಅಪಾಯಕಾರಿಯಾದ ಮತ್ತು ವಿಷಾದಕಾರಿಯಾದ ಸಂಗತಿಗಳನ್ನು ಕೂಡ ನವವ್ಯವಸ್ಥೆಗಳು ಹರಡುತ್ತಿವೆಯೆಂಬುದನ್ನು ಶೋಧಕರು ನಿರ್ಲಕ್ಷಿಸುವಂತಿಲ್ಲ. ೬೬] ಮನುಷ್ಯತ್ವವನ್ನು ಹುಡುಕಿ, ಹುಡುಕಿ ಸೋತವನೊಬ್ಬ ದುಃಖದಲ್ಲಿ ಬೆಂದು ಸೀಕರಿಯಾಗಿ ಕೆರೆಗೇ ನೆಗೆದನೆಂಬ ಕಾರಣದಿಂದಲ್ಲ, ರಾಣಿಯೊಬ್ಬಳು ಕಟ್ಟಿಸಿದ ಕೆರೆಯನ್ನು ತಳೆದುದರಿಂದ ಊರಿಗೆ ಅರಸೀಕೆರೆಯೆಂಬ ಹೆಸರು, ಬ್ರಹ್ಮನಿಗೇ ಜನನವಿತ್ತ ಬೀಡೆಂಬುದರಿಂದಲ್ಲ ಹರಿಯುತ್ತಿರುವ ಹಳ್ಳದ ಸಾಮೀಪ್ಯದಿಂದಾಗಿ ಹಗರಿಬೊಮ್ಮನಹಳ್ಳಿಯೆಂಬ ನಾಮ ಸ್ಥಾನಗಳನ್ನು ಸಿಂಗರಿಸಿತೆಂದು ಮುಂಕಣ್ಣ ಕೇಳಿದ.೬೭ ಮುಖ್ಯಮಂತ್ರಿ ಗುಂಡುರಾಯರ ಕಾಲದಲ್ಲಿ ವಿಶ್ವ ಕನ್ನಡ ಸಮ್ಮೇಳನಕ್ಕೆಂದು ವಾಹನಾದಿಗಳಿಗೆ ಅಧಿಕ ವ್ಯಯವಾದುದರಿಂದ ಬರೀ

ಬಹಳವರೆಗೆ, ದೊಡ್ಡ ಪ್ರಕಾಶಕರು ಪ್ರಕಟಿಸುವ ಪುಸ್ತಕಗಳನ್ನು ಸಹ ಕೊಳ್ಳಲಿಕ್ಕಾಗ ದುಡ್ಡಲ್ಲಿ ಅಷ್ಟೇ ನೀಡಬೇಕೆನ್ನುವಂಥ ವಿಶೇಷ ದುರ್ಭಿಕ್ಷ ವಾಚನಾಲಯಗಳಿಗೆ ತಟ್ಟಿರುವುದನ್ನು ವಾಸ್ತವವೆಂಬ ಕೃತಿಯಲ್ಲಿ ನಮೂದಿಸಲಾಗಿದೆ. ಕನ್ನಡ ಧ್ವಜಗಳು ಮೇಲೇರುವ ರೀತಿಲಿ ಗೈಸಿಸು ಘನ ಕಾರ್ಯವಿಂದು | ವಿಶ್ವ ಕನ್ನಡ ಸಮ್ಮೇಳನ ನಡೆಸಲು ಉಬ್ಬುಗಿಸಿದನಾ ಗುಂಡೂರಾಯ | ವ್ಯಯಗಳ ಹೆಚ್ಚಿಸಿ ತಪ್ಪಿಸಿದನ್ನೈ ಬೇಗನೆ ಸಂಪದ ನ್ಯಾಯ || ಪೊತ್ತಗೆಗಾರರ ಗತಿಯಲಿ ತಂದನು ನಿಜಕೂ ನೀಗದ ಗಾಯ | ಪೊತ್ತ್ವಾಟಿಕೆ ಸಹ ಸಂಕಷ್ಟವರದು ಬಲಿಯಿತು ಜಗದಲಿ ನ್ಯಾಯ | ಹಿತಚಿಂತನೆಗಳ ದೂರಕೆ ಸರಿಸಲು ಪಡೆವುದೆ ಬಾಳಿದು ಶ್ರೇಯ || ೧೮) ಜೀವನದಲ್ಲಿ ನಿರೀಕ್ಷಾತೀತವಾದ ಆಕಸ್ಮಿಕ ವಿದ್ಯಮಾನಗಳು ಅಲ್ಲಲ್ಲಿ ಕಾಣಿಸಿಕೊಳ್ಳುವುದಿದೆ. ಚಿತ್ರಸರ್ಗಕ್ಕೆ ವಿಶಿಷ್ಟ ಕಾರ್ಯಕ್ರಮದ ಸಲುವಾಗಿ ಬಂದಿದ್ದ ಸಂತೋಷ ಕುಮಾರ ಗುಲ್ವಾಡಿಯವರು ಖ್ಯಾತಚಿತ್ರಸಾಹಿತಿ ವೇಣುರವರೊಂದಿಗೆ ಕೋಟಿ ಜೊಕ್ಕಾಗಲೀ ಮುಂಕಣ್ಣಾ ಸಹ ಯಾವುದೋ ಪ್ರೇರಣೆಯಿಂದ ಅತ್ತ ನಡೆದಿದ್ದುದು, ಬಳ್ಳಾರಿಗೆ ರಾಜೀವಗಾಂಧಿಯವರು ಭೇಟಿಯಿತ್ತಾಗ ಅತನೂ ಆ ನಗರದಲ್ಲಿದ್ದುದು ಬೀಗಿರುವುವನ್ನು ಇಂಥವಕ್ಕೆ ದೃಷ್ಟಾಂತಗಳಾಗಿ ನೀಡಬಹುದು. ೧೯) ಬಗೆಬಗೆಯ ಆಕರ್ಷಣೆಗಳ ಸಂಕುಲ ಹೆಚ್ಚಾಗಿ ಯಾವುದೇ ಬೆಡಗನ್ನು ತಾಳಿರದ ಶಾಶ್ವತ ಸತ್ಯಗಳನ್ನು ಗುರುತಿಸುವ, ಮಾನಿಸಿ, ಪ್ರವೇಶಿಸುವ ಸಹಜತೆಯನ್ನು, ಮೂಲಸ್ವಭಾವವನ್ನೇ ಮನಸ್ಸಿಂದು ಕಳೆದುಕೊಂಡಿದೆ. ನಿಜವಾದ ಸಂಗತಿಗಳನ್ನು ಗ್ರಹಿಸಿಕೊಳ್ಳುವ ಸಾಮರ್ಥ್ಯ ಅದಕ್ಕಿಲ್ಲವಾಗಿದೆ. ಮುಂದೋರಿ ವಸ್ತುಗಳು ವರ್ಣಮಯವಾಗಿ ಕಂಗೊಳಿಸಿದಾಗ ಮಾತ್ರ ಅವನ್ನು ಪುರಸ್ಕರಿಸುತ್ತದೆ. ಬಾಳ್ವೆಗಳಲ್ಲಿ ಭೀಕರ ಸಮಸ್ಯೆಗಳ ಪ್ರಾಬಲ್ಯ ದಿನದಿಂದ ದಿನಕ್ಕೆ ವಿಸ್ತರಿಸುತ್ತಿರಲು ಸ್ವಲ್ಪವೂ ಸುಳಿವೀದಗದಂತೆ ನಿಷ್ಕ್ರಿಯವಾಗಿಂಥ ಪ್ರವೃತ್ತಿಗಳೇ ತಳಪಾಯಗಳಿರುತ್ತವೆಂಬುದನ್ನು ಮನುಷ್ಯ ನಿರ್ಲಕ್ಷಿಸಿದ್ದಾನೆ. ಇನ್ನಷ್ಟು ವಿಷಾದಕಾರಿ ಸಂಗತಿಯೊಂದರೆ ಬಾಳ್ವೆಯನ್ನು ಪ್ರವೇಶಿಸುತ್ತಿರುವ ವಿದ್ಯಾರ್ಥಿಗಳು ಸಹ ಈ ರೀತಿಯ ಸುಳಿಗಳಿಗೇನೇ ಸಿಲುಕುತ್ತಿರುವುದು. ಗುಟ್ಟಿನ ಮಾತೊಂದ ಹೇಳ್ತೀನಿ ತರುಣರೆ ಬಿಟ್ಟನು ಗೈಯದೆ ನಿನ್ನೇಳಿ | ಬಿಟ್ಟಿಯು ಕೆಡಿಸಲು ಸನ್ನದ್ಧಾಗಿಹ ಸೆಳೆತವ ಮೀರುತೆ ನೀವ್ಬಾಳಿ || ೨೦) ಜಲನಿರೋಧಕಗಳ ರೀತಿಯಲ್ಲೇ ಅಗ್ನಿನಿರೋಧಕಗಳು ಸಹ ಜಗತ್ತಿನಲ್ಲಿ

ರಬೇಕೆಂದು ತೋರುತ್ತದೆ. ಅವುಗಳ ಸಹಾಯ ಪಡೆದೇ ಬೆಂಕಿಯ ರಾಶಿಯಲ್ಲಿ ಹೋರಾಡುವುದೇ ಮೊದಲಾದ ಮಹಾಸಾಹಸಗಳನ್ನು ಹಲವರು ನಡೆಸುತ್ತಿದ್ದಿರಬಹುದು. ಮನಸ್ಸನ್ನು ನೀಚ ಪ್ರವೃತ್ತಿಗಳಿಂದ ಬೇರ್ಪಡಿಸುವ ಮಿಥ್ಯಾನಿರೋಧಕಗಳು ಮಾತ್ರ ಯಾವೊಬ್ಬ ವಿಜ್ಞಾನಿಯ ಹಸ್ತಕ್ಕೂ ಪ್ರಾಪ್ತವಾಗಲಿಲ್ಲ. ಅವಿಲ್ಲದೆ ಸಾವಿರಾರು ಭೌತಿಕ ಸುಖ, ಸೌಕರ್ಯಗಳನ್ನಷ್ಟು ವಿಸ್ತರಿಸಿರುವುದೇ ನವನಾಗರಿಕತೆಯ ತಿಳುವಳಿಕೆಗಳೆಲ್ಲ ಮಹತ್ತರ ದುಃಖದಾಯಕಗಳೆನ್ನಿಸುವ ದುಸ್ಥಿತಿಗೆ ಕೆಡೆದಿರಲು ಕಾರಣವಾಯಿತೆಂದು ತೀರ್ಮಾನಿಸಬಹುದು. ತಮ್ಮನ್ನು ಸುತ್ತಿರುವ ಯಾವುದೇ ಭೂತದ ಮೂಲಕ ಕೆಡುಕುಗಳು ಅಂತರಂಗವನ್ನು ಪ್ರವೇಶಿಸದ ಹಾಗೆ ತಡೆಯುವ ಸಾಮರ್ಥ್ಯವನ್ನು ಮನುಷ್ಯರು ಪಡೆದಾಗ ಮಾತ್ರವೇ ವ್ಯಕ್ತಿವ್ಯಕ್ತಿಯೂ ಮಿಗಿಲಾದ ಸತ್ಯ, ಶಿವ, ಸೌಂದರ್ಯ, ಶಕ್ತಿ, ತೇಜಸ್ಸುಗಳ ನೆಲೆಯಾದಾನು. ಭಕ್ತಿ, ಜ್ಞಾನ, ವಿರಕ್ತಿ, ಮಾಧುರ್ಯ, ಲಾಲಿತ್ಯಗಳ ಸನ್ಮಂದಿರನಾದಾನು. ಚಿನ್ಮೋದ, ಶಾಂತಿಗಳ ಸಿರಿಸ್ಥೈರನಾದಾನು, ಚಿನ್ನಾದಗಳ ಜೊನಲಾದಾನು. ೭೧) ಅನ್ನೊಂದು ಬಾರಿ ಧ್ವನಿಸಾಧನಗಳ ಮಧ್ಯೆ ಜನಗಿತ್ತು ಮೇಲಾಟ। ಮೊಡುಕ್ತ ಸೂಕ್ತವುಗಳ ತಮಟೆಯಾರ್ಭಟೆ। ಕಿವಿ ಸುತ್ತ ಕಟ್ಟಿತ್ತು ರವಗಳ ಹಿರಿಕೋಟೆ। ಅದನೆ ಮಹದೆಂದಿತ್ತು ಜನರೆಲ್ಲ ಪೇಟೆ। ವೀಣೆ ಸ್ಪಂದನ ಮಾತ್ರ ಯಾರಿಗೂ ಕೇಳಿಸಲಿಲ್ಲ. ಜಗತ್ತಿನಲ್ಲಿ ಅನೇಕ ಬಾರಿ ಹೀಗಿರುವ ವಿದ್ಯಮಾನಗಳು ನಡೆಯುತ್ತಿರುತ್ತವೆ. ಜನರ ಮಧ್ಯೆ ಅಜ್ಞಾನ, ಭ್ರಾಂತಿಗಳ ತೆರೆಗಳನ್ನು ಹರಡಿದವರಿಗೇನೇ ಹಲವು ಸಂದರ್ಭಗಳಲ್ಲಿ ಜ್ಞಾನಪೀಠ ಪ್ರಶಸ್ತಿ ದೊರೆಯುವುದಿದೆ. ಕಮಲದಂತಹ ನಿರ್ಲಿಪ್ತಶೀಲವನ್ನು ನಾಮಮಾತ್ರವಾದರು ತಳೆದಿರದೆ ಜಾತಿ, ಮತ, ಪಕ್ಷಾದಿ ಪಕ್ಷಪಾತದ ನಡೆಗಳಾಂತಿರುವವರಿಗೆ, ಭಯಂಕರ ಸ್ವಾರ್ಥ ಪಥದಲ್ಲಿ ಬೀಗಿರುವವರಿಗೆ ಪದ್ಮಭೂಷಣ ಬಿರುದು ಸಂದಾಯವಾಗುವುದಿದೆ. ಭ್ರಷ್ಟಾಚಾರ, ಅನಾಚಾರಗಳ ಕಾರಸ್ಥಾನಗಳಲ್ಲಿ ವಿಜೃಂಭಿಸುತ್ತಿರುವವರಿಗೇನೇ ರಾಷ್ಟ್ರರತ್ನದ ಮಾನ್ಯತೆ ತಲಪುವುದಿದೆ. ಯಾವುದಾದರು ರೀತಿಯಲ್ಲಿ ಸಮಾಜದ ಹಿತಗಳಿಗೆ ಭಂಗ ತರುವವರನ್ನೇ ಪ್ರವರ್ಧಕ ಪದಕ ಸಿಂಗರಿಸುವ ಸಂದರ್ಭಗಳಾದರು ಕಾಣಿಸಬಹುದೆಂಬುದು ವಾಸ್ತವಾತೀತವಲ್ಲ.

೭೨) ಸಾಹಿತಿಯೊಬ್ಬ ಎಷ್ಟೇ ಉತ್ತಮ ವಿಚಾರಗಳನ್ನು ಹರಡುತ್ತಿದ್ದರು ಸಮಾಜದ ಹೆಚ್ಚಿನ ಸದಸ್ಯರು ಬರೀಮವನ್ನು ಮೂಸಿ ನೋಡುವುದರಿಂದಲು

ಹಿಂಮೆಟ್ಟಿಸುತ್ತಾರೆ. ಅವರ ಪ್ರಸಾಸಾಂತರಗಳ ಸಹಾಯದಿಂದ ಆತನಿಗೆ ನಾನಾ ಪ್ರಶಸ್ತಿ ಲಭಿಸಿತೆಂದರೆ ಮನಗಳು ಸಾವಿರಾರು ಸಂಖ್ಯೆಯಲ್ಲಿ ಸಾಲು ಸಾಲಾಗಿ ನೆರೆದು ಆತನೆಡೆಗೆ ಪ್ರವಹಿಸತೊಡಗುತ್ತವೆ. ಸಭೆ, ಸಮಾರಂಭಗಳು, ಸನ್ಮಾನಕೂಟಗಳು ಬಿಡುವಿಲ್ಲದೆ ಜರಗುತ್ತವೆ. ಆತನ ರಚನೆಗಳಿಗೆ ಸಂಬಂಧಿಸಿದ ವಿಚಾರಗೋಷ್ಠಿಗಳು ಅಗಣಿತವಾಗಿ ಸ್ಥಳಸ್ಥಳದಲ್ಲಿ ವಿವಿತವಾಗುತ್ತವೆ. ಇವೆಲ್ಲ ಬೌದ್ಧಿಕ ದರ್ಶನಗಳಿಗಿಂತ ಹೆಚ್ಚಾಗಿ ಜನರಿಂದು ಪ್ರಶಸ್ತಿಗಳನ್ನು, ಸಂಭ್ರಮೋತ್ಸವಗಳನ್ನು ಬೆಂಬತ್ತುತ್ತಿದ್ದಾರೆಂಬುದನ್ನು ಸಮರ್ಥಿಸುತ್ತವೆ. ಬಿರುದನ್ನು ಪಡೆದವರದೇ ರೀತಿಯಲ್ಲಿ ವಿಚಾರಗಳನ್ನು ಮಂಡಿಸುವವರು ಸಹ ಸಹಸ್ರಾರು ಗಣನೆಗಳಲ್ಲಿ ಬಲುವೇಗನೆ ಆವಿರ್ಭವಿಸುವುದರಿಂದ ಅವರ ಸ್ವತಂತ್ರವಾದ ಮೂಲಭೂತ ವೈಶಿಷ್ಟ್ಯ ಚರಿತ್ರೆಯು ಮರೆಗೆ ಸರಿಯುವಂತಾಗುತ್ತದೆ. ೭೩) ಹುಂ ; ಏನಾದರಾಗಲಿ, ಕರ್ನಾಟಕದಲ್ಲಿ ಮತ್ತೊಮ್ಮೆ ಜನತಾ ಪಕ್ಷ ಜಯಗಳಿಸಿದೆ. ಸನ್ತೋಷದೊಂದಿಗೆ "ಹೊಡಿ, ಹೊಡಿ, ಜಯಭೇರಿಯ ಜನತಾ ಜಯಗಳಿಸಿತೆಂದು | ಕೆಡೆಯಿತು ಅಸ್ಥೈರ್ಯದ ಘನಾತಂಕವು ಇಂದು | ಪಡೆಯುತ ಹೊಸ ಗೌರವ ಜನ ವಿಶ್ವಾಸದಿ ಮಿಂದು | ನಡೆಯುವ ಸ್ಥಿತಿ ಬದಲಿಸಿ ನಿಜ ಸುಖ ಮೂಡಿಸಲೆಂದು" ಎಂದವರು ಘೋಷಿಸುವಂತಾಗಿದೆ. ಹೋ ! "ಹಕ್ಕಿ ಹಾರಿ ಬಂದಿತು | ಮತ್ತೆ ಸಿಕ್ಕಿಕೊಂಡಿತು ಹಾರಲೊಮ್ಮೆ ತೀವ್ರ ನಭಕೆ | ಒಲಿಲಿ ಮರಳಿ ಸಿಲುಕಿತು" ಎಂದು ಸಂಬಂಧಿತರು ಸಂಭ್ರಮ ಪಡುವಂತಾಗಿದೆ. ಅದಾವ ಹಕ್ಕಿಯನ್ನುತ್ತೀರೋ ? ಹೌದು. ರಾಜಕೀಯದಲ್ಲಿ ಆಗಾಗ ಸ್ಥಾನವನ್ನು ಬದಲಾಯಿಸುತ್ತಿರುವ ಜಯದ ಹಕ್ಕಿಯೇನೇ.

### ಉ. ಸಂಭಾಷಣಾತ್ಮಕ

೧) "ರಾತ್ರಿ ಸೊಳ್ಳೆಗಳೊಂದಿಗೆ ಯುದ್ಧ ನಡೆಸ್ತೀರ ಸ್ವಾಮಿ" "ಅಬ್ಬಾ! ಭಯಂಕರ ! ಯಾವಸ್ತ್ರವೂ ಉಪಯೋಗ ಕೊಡೋದಿಲ್ಲ. ನಿಮ್ದು ಹೇಗೋ ಸ್ಥಿತಿ ?" "ಅಯ್ಯೋ, ನಾನಂತೂ ಅವುಗಳೊಡನೆ ಹೋರಾಡಿ, ಹೋರಾಡಿ, ಸೋತು, ಸೋತು, ತೀಕ್ಷ್ಣ ಗಾಯಗಳಾಗಿ ಹುಣ್ಣಾಡರಿ ಒದ್ದಾಡುತ್ತಿದ್ದೇನೆ. ಜಾತೀಯ ಸಮಾನತೆಯನ್ನು ಮೂಡಿಸಿದ ಸಮಾಜ ಮಾನವೀಯ ಪ್ರಮುಗಳಿಗೂ ಸಮಾನತೆ ತಂದು ಸಮ್ಮಾಥವರು ಸಹ ಸೊಳ್ಳೆಪರದೆ ಬಳಸುವಂತೆ ಗೈಸಿದರೆ "ಮೀರಿಯಾದ ವಿಶುದ್ಧ ಸೊಳ್ಳೆಪರದೆ ಉಪಯೋಗಿಸಿ" ಎನ್ನುವಂಥ ಸರಕಾರದ

ಘೋಷಣೆ ಕೇವಲ ಶ್ರೀಮಂತರ ಬಗ್ಗೆ ಮೀಸಲಾಗದೆ ನಮಗೂನೂ ಅನ್ವಯಿಸಿಕೊಂಡು ನಮ್ಮಂಥವರು ಸಹ ಹೆಚ್ಚುಕಾಲ ಬದುಕಿಕೊಳ್ಳಲು ಸಾಧ್ಯವಾದೀತು" ೨) "ಯಜಮಾನರು ಇದ್ದಾರಾ ?" "ಇಲ್ಲ ಏನು ಬೇಕಾಗಿತ್ತು ?" "ಒಡೆಯನಿಲ್ಲದಿರುವಾಗ ನನಗುಪಯೋಗವಿಲ್ಲ. ಸರಿ ಬರುತ್ತೇನೆ" "ನಿಲ್ಲಪ್ಪ. ಯಾವುನೀನೆಂದು ಹೇಳದೆ ಹೊರಡುತ್ತೀಯ ?" "ಅದಿಲ್ಲ ಗೋರ್ಕಲ್ಲ ಮೇಲೆ ಮಳೆಸುರಿದ ಹಾಗಾದೀತಷ್ಟೆ" "ಅವನು ಯಾರೆಂಬುದನ್ನು ತಿಳಿಸು" "ನಿಮ್ಮ ಬಾಳುವೆಯನ್ನು ಪೋಷಿಸಿರುವ ಧರ್ಮವೆನ್ನುವ ಪಿತನ ಚಾರ ನಾನು. ನಿಮ್ಮ ಭೌತಿಕ ಯಜಮಾನರನ್ನಾದರು ಸಲಹಿರುವ ಸಾಂಸ್ಕೃತಿಕ ಜನಕನಾತ. ಆತನಿಗೂ ನಾನು ಸೇವಕ. ನಿಮ್ಮ ಮನಸ್ಸನ್ನು ತನ್ನವರದಲ್ಲಿರಿಸಿ ಪ್ರೇರಿದಂಥ ಭಾಷಾ ಮಾತೆಗೆ ಈ ಬಾಳ್ವೆ ಕಿಂಕರ. ನಿಮ್ಮ ಪತಿಯ ಚಿತ್ತವನ್ನಾದರು ಪಾಲಿಸಿದ ತಾಯಿಗೆ ಕರಣಗಳಿವಾಕು. ಮೂಲಾತ್ಮಗಳಿಗಿವು ಸಮರ್ಪಣ. ಹಾಗಿದ್ದರು ಪ್ರಾಪಂಚಿಕ ವಸ್ತುಗಳನ್ನು ಮಾನಿಸುವುದೇ ಸಮಾಜದಲ್ಲಿ ಪ್ರಾಧಾನ್ಯ ಗಳಿಸಿಕೊಂಡಿರುವಾಗ ಪಥಕ್ಕೇ ಗತಿಯೊದಗಿತು" "ಯಜಮಾನರಲ್ಲಿ ಏನೆಂದು ಹೇಳಲಿ ?" "ಗುರುತಿಲ್ಲದ, ಪರಿಚಯವಿಲ್ಲದ ಪರದೇಶಿ, ಹೆಸರನ್ನಾದರು ತಿಳಿಸದವ, ನಿಮ್ಮ ತಂದೆಯ ಚಾರ, ತಾಯಿಯ ಚಾರ ಬಂದು ಹೋದನೆಂದು ಹೇಳಿ. ಅಷ್ಟೇ ಸಾಕು" ೩) "ಯಾರ ಸೈತಿ ನೀನು ?" "ನಾನಾರ ಸೈತಿನೂ ಅಲ್ಲ. ಎಲ್ಲಿಂದಲೋ ಬಂದೆ, ಯಾವೆಡೆಗೋ ಹೋಗುತ್ತಿದ್ದೇನೆ. ಮೂಲಸೇವೆಗಳ ಬಗ್ಗೆ ಸ್ವಲ್ಪವಾದರು ತಿಳಿದುಕೊಳ್ಳದ ಮನುಷ್ಯರೆನ್ನಿಸಿದವರ ಸಮೂಹದ ಸಂಸ್ಕೃತಿಯ ಕೈಂಕರ್ಯಕ್ಕೆ ಬೇರೆವಿದರ ಶಕ್ತಿಗಳು ನವೆಯುತ್ತಿವೆ" "ಅದಾವಮನೆ ಬೇಕಾಗಿತ್ತಯ್ಯ ?" "ಈ ತನುಮಂಗಗಳು ನಿರೀಕ್ಷಿಸುವುದು ಭಾಷಾಭಿಮಾನಿಗಳ ಸುಗ್ರಹವನ್ನು. ಅಂತಹ ಅಭಿಮಾನ ತಳೆಯದಿರುವವರು ಮೃತಕಾಯಗಳಿಗೆ ತುಲ್ಯ. ಅಂಥವರೆಡೆಗೆ ಸಾಗಿಯಾದರೂ ಬಾಳ್ವೆಗಾಗಲೀ, ಸಾಧನೆಗಾಗಲೀ, ಯಾವ ನೆರವಾದರೂನೂ ಸಿಗಲುಂಟೇ ? ಮೌನವಲ್ಲದೆ ಬೇರೆ ಗತಿಯುದೆಯೇ ವಣಿ ?"

## ಊ. ತಾತ್ವಿಕ

೧) ಭಗವಂತನೆಂದರೆ ಅಪ್ರತಿಮನಾದ ಸತ್ಯ, ಶಿವ, ಸೌಂದರ್ಯ, ತೇಜಸ್ಸುಗಳ ಮಹತ್ತರವಾದೊಂದು ನಿಧಿ. ಪ್ರತಿಯೊಂದು ಜೀವಿಯಲ್ಲಿ ಕೂಡ ಅಣು ಪ್ರಮಾಣದಲ್ಲಿ ಈ ಅಂಶಗಳೆಲ್ಲ ಸೇರಿರುತ್ತವೆ. ಅದರಿಂದ ಒಳದೃಷ್ಟಿಯಲ್ಲಿ

ನೋಡಿ ಪರಮಾತ್ಮ ಸರ್ವತ್ರ ವ್ಯಾಪಕ, ಜೀವದಲ್ಲಿಯು ಆತ ನೆಲಸಿದ್ದಾನೆಂದು ನಚ್ಚಿಕೊಳ್ಳಬಹುದು. ಇದಕ್ಕಿಂತಲು ಮುಂದರಿದು ಸೀಮಿತವಾದ ಮತಿಗಳು ಸಮೀಪಸ್ಥ ರೂಪಗಳಲ್ಲೇ ಜಗದೊಡೆಯನನ್ನು ಕಂಡುಕೊಳ್ಳಬಹುದು. ಹೊರ ದಿಟ್ಟಿಯನ್ನೇ ಆಧಾರವಾಗಿಸುವವರು ಜೀವ ಬೇರೆ, ಸೃಷ್ಟಿಕರ್ತನೇ ಬೇರೆನ್ನುವಂಥ ಮಾರ್ಗವನ್ನಾದರು ಹಿಡಿಯಬಹುದು. ಆಕಾರಗಳಿಗಾಗಲೀ, ನಿರಾಕಾರಕ್ಕಾಗಲೀ ಲೋಕಸ್ವಾಮಿ ಹೊರತಾದವನಲ್ಲ. ಅವುಗಳಿಗೇನೇ ಬದ್ಧನಾಗಿರುವವನೂ ಅಲ್ಲ. ಆಕಾರರಹಿತವಾದ ಜಲ ಧರಿಸಿದ ಪಾತ್ರೆಯಾಕಾರವನ್ನೇ ಮೈದಳೆಯುತ್ತದೆ. ಅದೇ ರೀತಿ ಮೂಲತಃ ನಿರಾಕಾರಿಯಾಗಿದ್ದರು ಭಾವವನ್ನನುಸರಿಸಿ ಯಾವಾಕಾರದಲ್ಲಿ ಬೇಕಾದರು ಪರಮಾತ್ಮ ವಿಜೃಂಭಿಸಬಹುದು. ಸಣ್ಣ ಮಡುವೂ ಜಲಾಶಯವೇ, ಸಾಗರವೂ ಜಲಾಶಯವೇ. ಒಳದಿಟ್ಟಿಯಲ್ಲಿ ವೀಕ್ಷಿಸಿ ಜ್ಞಾನಿಗಳು ಅವುಗಳಲ್ಲಿ ಏಕತ್ವವನ್ನು ಕಂಡುಕೊಳ್ಳಬಹುದು. ಸಾಗರ ಸಮೀಪವಿರದವರು ಕೆರೆಯೊಂದನ್ನೇ ಸಾಗರವೆನ್ನುವ ಪೂಜ್ಯತೆಯಿಂದ ಮಾನಿಸುತ್ತಿದ್ದರಾದರೆ ತಪ್ಪೇನಿರುವುದಿಲ್ಲ. ಆರ್ಯ ಪರಂಪರೆಗಳ ವೈಶಾಲ್ಯ ಮನದಟ್ಟಾಗದಿರುವುದೇ ಹಲವರವುಗಳಿಂದ ವಿಮುಖವಿರುವ ಭಾವನೆಗಳಿಗೆ ಗುರಿಯಾಗಲು ಕಾರಣವಾಗುತ್ತಿದೆ. ೨) ಪುಟ್ಟಪರ್ತಿಯ ಬಾಬರ ತತ್ತ್ವಗಳಾದರು ಯಾವುದೇ ವಿಧದಲ್ಲಿ ಸನಾತನ ತತ್ತ್ವಗಳಿಗೆ ಕುಂದೆಸೆಯುತ್ತಿಲ್ಲವೆಂದು ಸಾರಬಹುದಾಗಿದೆ. ಆದರೆ ಸದ್ಯ ೫೦೦ ರಷ್ಟು ಸೇವಾಕೇಂದ್ರಗಳನ್ನು ತಳೆದಿದ್ದು ಕಾಲದಿಂದ ಕಾಲಕ್ಕೆ ವಿಸ್ತರಿಸುತ್ತ ಮತ್ತೊಂದು ಪ್ರಮುಖ ಧಾರ್ಮಿಕ ಸಂಸ್ಥೆಯಾಗಿ ಬೆಳೆದಿರುವ, ಅಬೂಪರ್ವತದಲ್ಲಿ ಕೇಂದ್ರವಿರುವ ವಿಶ್ವವಿದ್ಯಾಲಯದವರು ಮಿತ್ರರಂತೆ ತೋರಿದರು ತಳಬುಡವಿರದಂತಿರುವ ಸಂಗತಿಗಳಿಂದ ಹಿಂದೂಧರ್ಮದ ಮೂಲಗಳನ್ನೇ ಘಾತಗೊಳಿಸಲು ತೊಡಗಿದ್ದಾರೆಂದು ಅನಿವಾರ್ಯವಾಗಿ ಹೇಳಲೇಬೇಕಾಗುತ್ತದೆ. ಭಾರತೀಯರಲ್ಲಿ ದೀರ್ಘಕಾಲದಿಂದ ಬೆಳೆದಿರುವ ಮೂರು ಮೂರ್ತಿಗಳ ವಿಶ್ವಾಸಕ್ಕೆ ಬದ್ಧರಿರುವಂತೆ ನಟಿಸುತ್ತ ಭಕ್ತರನ್ನು ಸನಿಗಳಿಂದ ಶೋಷಪಡಿಸಿ ಮತ್ತೆ ನಿಧಾನವಾಗಿ ತ್ರಿರೂಪಶ್ರದ್ಧೆಗಳಿಗೆಲ್ಲ ಬಂಗನಾಮವನ್ನು ಬಳಿದು ಬೇರೊಂದು ದಿಕ್ಕಿಗವರ ಮನಸ್ಸನ್ನು ಸೆಳೆಯುತ್ತಾರೆ. ಅವರ ಘೋಷಣೆಯ ಪ್ರಕಾರ ದೇಹಧಾರಿಯಾಗಲು ಸಾಧ್ಯವಿಲ್ಲದಂಥ ಮಿತಿ ಬೇಪಸಿಗೊಡಗುತ್ತದೆ. ಆತ ಕೇವಲ ಜ್ಯೋತಿರ್ಬಿಂದುವಿನ ಸ್ವರೂಪವನ್ನು ತಳೆದಿರುತ್ತಾನೆ. ಹಾಗೆ ನೋಡಿದರೆ

ನೀರಿನವರು ಹನಿಗಳ ಕೂಡಿಕೆಯಾಗಿದ್ದು ಸಂದರ್ಭಗಳಿಗೆ ಹೊಂದಿ ವಿವಿಧಾಕಾರಗಳನ್ನು ಧರಿಸಿರುತ್ತದೆ. ಸಾಗರವದರದೇ ಅಪ್ರತಿಮಾಕಾರವಾಗಿದೆ. ಜಗತ್ತನ್ನು ಬೆಳಗುವ ಸೂರ್ಯ ಕಿರಣಾಣುಗಳೊಂದು ಪ್ರಚಂಡ ಸಮೂಹವಾಗಿದ್ದಾನೆ. ನಿರ್ಮಾಣಕಾರಿ ತತ್ತ್ವಗಳ ಆವಿಷ್ಕಾರವೆಸಗುತ್ತ ಸಾಗರ ಮೂಲತಃ ಬಿಂದುರೂಪವಾದುದು, ಸೂರ್ಯ, ನಕ್ಷತ್ರಗಳು, ಹಾಗೆಯೇ ಕಿರಣಾಣುರೂಪಿಗಳು, ಪರಮಾತ್ಮ ತೇಜೋಬಿಂದುಸ್ವರೂಪಿಯಿರುವನೆಂದು ವಾದಿಸಿದರೆ ತಪ್ಪೇನಿರಲಿಕ್ಕಿಲ್ಲ. ಆದರೆ ಹನಿ ಕೆರೆ, ನದಿ, ಸಾಗರ ಮುಂತಾದ ನಾನಾಕಾರಗಳನ್ನು ಧರಿಸಿಕೊಳ್ಳಲು ಸಾಧ್ಯವಿಲ್ಲ, ಕಿರಣಾಣುಗಳು ದೀಪ, ಸೂರ್ಯ, ನಕ್ಷತ್ರಗಳ ರೂಪಗಳನ್ನು ತಳೆಯಲಾರವು, ತೇಜೋಬಿಂದು ಮಹಾಗಾತ್ರಗಳಲ್ಲಿ ವಿಜೃಂಭಿಸಲಾರದೆಂದು ಪರಿಮಿತಿಗಳನ್ನೊಡ್ಡಿದಾಗ ಮಾತ್ರ ದೋಷಗಳುಂಟಾಗುತ್ತವೆ. ಹಾಗಿದ್ದರು ಬ್ರಹ್ಮಪುತ್ರ ಬೋಧನೆಗಳಲ್ಲಿ ತ್ರಿಮೂರ್ತಿಗಳು ಬೇಕಷ್ಟೆಡೆಗಳಲ್ಲಿ ರಾರಾಜಿಸುತ್ತಾರೆ. ವಿಷ್ಣು, ಶಿವರು ಪುರಾಣಾಕಾರಗಳಲ್ಲಿದ್ದು ಬ್ರಹ್ಮ ಮಾತ್ರ ಮಾನವಾಕಾರವನ್ನು ಧರಿಸಿರುತ್ತಾನೆ. ಆತನಿಗೇನೇ ಪರಮಪಟ್ಟವನ್ನು ನೀಡಲಾಗುತ್ತದೆ. ಮತ್ತೊಂದು ದಿಕ್ಕಿನಲ್ಲಿ ದೇಹಧಾರಿಯಾಗಿರುವ ಕೃಷ್ಣ ಕೇವಲ ದೇವಾತ್ಮನೇ ಹೊರತು ಪರಮಾತ್ಮನಲ್ಲವೆಂದು ಖಂಡಿಸುತ್ತಾರಿವರು. ಗುರುವೆನ್ನುವ ವ್ಯಾಮೋಹಾನ್ವಿತ ಕಾರಣದಿಂದಿರಬಹುದು ಪ್ರಜಾಪಿತನಿಗೆ ಹೀಗಿರುವ ವಾದದಿಂದ ಧಾರಾಳವಾದ ವಿನಾಯತಿಯನ್ನು ಸಲ್ಲಿಸಲಾಗಿದೆ. ಮನುಷ್ಯಾಕಾರ ತಳೆದಿದ್ದರು ಜಗಗುರುವೆಂದೇ ಆತನನ್ನು ನಚ್ಚಬಹುದು. ಇನ್ನೊಂದೆಡೆ ಈಶ್ವರನಿಗೆ ಮಾತ್ರ ವಿಶೇಷಾನುಕೂಲತೆಯೊಂದನ್ನು ನೀಡಿ ಆತನ ನಿರಾಕಾರದಸ್ತಿತ್ವವನ್ನು ಸಾಕಾರದಿಂದ ಪ್ರತ್ಯೇಕಿಸಿ ಕ್ರಮವಾಗಿ ಶಿವ ಹಾಗು ಶಂಕರನೆನ್ನುವ ಹೆಸರುಗಳನ್ನವರಿಗೆ ಸಲ್ಲಿಸಿರುವುದಲ್ಲದೆ ತಂದೆ ಹಾಗು ಮಗನ ಸಂಬಂಧಗಳನ್ನು ಕೂಡ ಮತ್ತವರಲ್ಲಿ ಗುರುತಿಸಲಾಗಿದೆ. ಯಾವುದೋ ಪಾರಬ್ಧದಿಂದಾಗಿ ಮಾಧವನಿಗಿರಲಿ ಸ್ವತಃ ಬ್ರಹ್ಮನಿಗೇನೇ ಈ ಬಗೆಯ ಭಾಗ್ಯ ಪ್ರಾಪ್ತವಾಗಿಲ್ಲ. ಬೇರೊಂದು ಕಡೆ ಈ ಪಥಗಾಮಿಗಳು ಹೇಳುವ ಪ್ರಕಾರ ಕೆಲವು ಶತಕಗಳ ಹಿಂದಿನ ವರೆಗೂ ಜಗತ್ತಿನಲ್ಲಿ ದ್ವಾಪರಯುಗವಿತ್ತು. ಇವರೇ ಹೇಳುವಂತೆ ೧೨೫೦ ವರ್ಷಗಳ ಯುಗಸೀಮೆಯು ಇಮ್ಮಡಿ ಹಿಂದೆ ಸರಿದುದಾದರು ಚಾರಿತ್ರಿಕವಾಗಿ ದ್ವಾಪರದ ಚಟುವಟಿಕೆಗಳು ವ್ಯಕ್ತವಾಗುವುದಿಲ್ಲ. ನಮಗರಿಯುವಂತೆ ಮೊದಲ ಮೂರು ಯುಗಗ

ಕಲ್ಲಿ ಭಾಷಾದಿಗಳನ್ನು ರಚಿಸಿಕೊಂಡು ಮಹಾಕಾವ್ಯಗಳ ನಿರ್ಮಾಣದಷ್ಟು ಮನುಷ್ಯನ ನಾಗರಿಕತೆ ಮುಂಬರಿದಿರಬೇಕಾದರೆ ೧೫ ಸಾವಿರ ವರ್ಷಗಳಿಂದಾದರು ಕಡಿಮೆಯವಧಿ ಸಾಕಾಗಲಿಕ್ಕಿಲ್ಲ. ಪ್ರತಿಯುಗ ೫ ಸಾವಿರ ವರ್ಷಗಳಷ್ಟಾದರು ಖಂಡಿತವಾಗಿ ವಿಸ್ತಾರವಿದ್ದೀತು. ಇವರು ಸೂಚಿಸುವ ಕಾಲ ಸರಕಾರೀ ಕಾರ್ಯಗಳಲ್ಲಿ ವ್ಯಕ್ತವಾಗುವ ಸಮಯದಂತೆ ಮುಮ್ಮಡಿ ನಾಲ್ಮಡಿಯದ್ದೆಂದೂಹಿಸಿದರೆ ಈ ಆಕ್ಷೇಪ ನಿವಾರಣೆಯಾದೀತು. ನಾಲ್ಕು ಯುಗಗಳಲ್ಲಿ ಮನುಷ್ಯನಾಯುಷ್ಯ ೧೫೧ ವರ್ಷಗಳಿಂದ ೫೦ ವರ್ಷಗಳಿಗೆ ಸಾಮಾನ್ಯವಾಗಿ ಕುಸಿದಿದೆಯೆಂಬವರ ಮಾತನ್ನು ಸತ್ಯ ನಚ್ಚಬಹುದೇನೋ, ಕಾರಣ ಭೌತಿಕ ಸಾಧನೆಗಳೆಷ್ಟೇ ಮುಂದರಿದರು ಕಾಲದಿಂದ ಕಾಲಕ್ಕೆ ಜಗತ್ತನ್ನು ರೋಗ, ಮಾಲಿನ್ಯ, ದುಃಖಗಳ ಬೀಡಾಗಿಸಿಕೊಳ್ಳುವುದರಲ್ಲೇ ಮನುಷ್ಯ ತನ್ನ ವಿಶಿಷ್ಟ ಪರಾಕ್ರಮವನ್ನು ವ್ಯಕ್ತಗೊಳಿಸಿದ್ದಾನೆ. ಪರಂಪರಾಗತವಾದ ತತ್ತ್ವಗಳ ಪ್ರಾಯವನ್ನು ಬೇಗಾಗಮಿಸುವುದೆಂದು ತಾವರುಹುತ್ತಿರುವ ಪ್ರಳಯಕಾಲಕ್ಕೇನೇ ಸಮಾನವಾದ ಹೊಯ್ದಾಟಕ್ಕೆ ನಿಜಕ್ಕಿವರು ಸಿಲುಕಿಸಿದರಾದರು ಭೌತಿಕ ಮೌಢ್ಯಗಳಲ್ಲಿ ಬಂಧಿತವಿದ್ದ ಲಕ್ಷಾಂತರ ಮಂದಿಗಳ್ನು ಆಧ್ಯಾತ್ಮಿಕ ಕ್ಷೇತ್ರದ ನಾನಾಕರ್ಷಣೆಗಳೆಡೆಗೆ ಸೆಳದುಕೊಂಡು ಯಾವುದಾವದು ಬಗೆಯಲ್ಲಿ ದೈವಿಕ ವಿಶ್ವಾಸದ ಸಾಮ್ರಾಜ್ಯದಲ್ಲಿ ಸುತ್ತಾಡಿಸಿ ಹೃದಯಗಳಲ್ಲಿ ಸುಖ, ಶಾಂತಿಗಳನ್ನು ದೇಸಿಸುವುದರಲ್ಲಿ ಬ್ರಹ್ಮಕುಮಾರ ಸಂಸ್ಥೆ ಅಪರಿಮಿತ ಯಶಸ್ಸುಗಳನ್ನು ಹೊಂದುತ್ತಿದೆಯೆಂದು ಘಂಟಾಘೋಷವಾಗಿ ಸಾರಬಹುದಾಗಿದೆ. ಹಾಸನದ ಉತ್ತರ ಬಡಾವಣೆಯಲ್ಲಿರುವ ಶ್ರೀ ರಾಮಕೃಷ್ಣಮೂರ್ತಿಯವರು ಇದೇ ವರ್ಷ ಸಂಕ್ರಾಂತಿಯ ದಿವಸ ಅನಿರೀಕ್ಷಿತವಾದ ಭೇಟಿಯಲ್ಲಿ ಈಶ್ವರೀಯ ವಿದ್ಯೆಯ ನಿಸೂತನ ತತ್ತ್ವಗಳನ್ನು ವಿವರಿಸಿ ಜಲಚಿತ್ರಗಳ ಸಹಿತ ಮುಂದೋರಿದಾಗ ಮತಿಯಲ್ಲುದಿಸಿದ ಯೋಚನೆಗಳಿವು. ಸನಾಹ್ವಾನಕ್ಕೆ ತಲೆಬಾಗಿ ಕುಟುಂಬದೆಲ್ಲ ಸದಸ್ಯರೊಂದಿಗೆ ಸಂಸ್ಥೆಯನ್ನು ಹೊಕ್ಕಿರುವ ಹಿರಿಮೆಯವರದು. ವಿಶೇಷ ಭೋಜನವನ್ನು ಪಡೆದು ಹಿಂಬರುತ್ತಿದ್ದಾಗ ಸಂಸ್ಥೆಯ ಕೆಲವಾರು ದೃಷ್ಟಿಗಳೊಡನೆ ಮನಸ್ಸು ಕಚೆತಿತ್ತು. ನೋಡಿರೋ ನೋಡಮ್ಮ ಪರಮ ಪರಂಧಾಮ | ಬೀಡಾತ್ಮಗಳದಿರುವ ಶೋಭೆಯಂಥ ಧಾಮ | ಪೂರ್ಣತೆಯ ಪಡೆದಿರುವ ಜೀವಗಳ ನಿಲಯ | ವರ್ಣನಾತೀತವಿಹ ಶಾಂತಿಯಾ ನಿಲಯ || ಮಾಗಿರುವ ಸುಖ, ಶಾಂತಿಗಳ ರಮ್ಯ ಬೀಡು |

ತ್ಯಾಗಾತ್ಮರ್ಗಳು ಮೆರೆವ ಸೊಗಸುಗಳ ನಾಡು | ಯೋಗಿ ಸಂಕುಲ ಮೋಕ್ಷ ಮುಪದಿ ಮಗ್ನ ಗೂಡು | ರಾಗಚಯು ಗೆದ್ದವರು ಶೋಭಿಸುವ ಬೀಡು" ಹಿಂದಿನವರ ಬಾಳ್ವೆಗಳಲ್ಲಿದ್ದ ಅತೃಪ್ತಿಗಳಿಗಿಂತ ಆಧುನಿಕರವು ಯಾವ ವಿಧದಲ್ಲೂ ಕಡಿಮೆಯಾಗಿಲ್ಲ. ಬದಲಾಗಿ ಮೊದಲಿಗಿಂತ ಸಾವಿರಮಡಿಯಾಗಿ ಹೆಚ್ಚಿವೆ. ಹಿಂದಿನೆಷ್ಟೋ ಮಂದಿ ಶ್ರೀಮಂತಿಕೆ, ಸುಖಗಳನ್ನು ತಮ್ಮದಾಗಿಸಿಕೊಂಡು ಮಿಕ್ಕವರಿಗೆ ಸ್ವರ್ಗದತ್ತ ಬೊಟ್ಟು ತೋರುವುದಿತ್ತು. ದೀನರಿಗೆ, ದುಃಖಿಗಳಿಗೆ, ಹಾಸಿರುವ ಸೋಟಗಳು ಅತ್ಯಂತ ಆಪ್ಯಾಯಮಾನವಾಗುತ್ತವೆ. ಮುಂದಿನ ಸುಖಗಳ ವಿವರಣೆಗಳನ್ನು ಕೇಳುತ್ತಿದ್ದಾಗ ಅವರು ಬಾಯಗಲಿಸಿಕೊಂಡು ನೀರೊಸೆರುತ್ತ ಆಕಾಶದೆಡೆಗೆ ನೋಡುವುದರಲ್ಲಿ ಮೈಮರೆಯುತ್ತಾರೆ. ಪ್ರತಿಭಟನೆ ತನ್ನಿಂದ ತಾನಾಗಿ ತೊಲಗುತ್ತದೆ. ಹಸಿದಿರುವ ಮಗುವನ್ನು ಚಂದ್ರನೆಡೆಗೆ ವೀಕ್ಷಿಸುವುದರಲ್ಲಿ ನಿಮಗ್ನವಾಗಿಸುವ ನಿಪುಣ ಮಾತೆಯಂತೆ ಬ್ರಹ್ಮಕುಮಾರರ ತತ್ತ್ವಗಳಿದ್ದು ಧನಿಕರ ಪರಿಪೋಷಣೆಗಳಿಗೆ ಅತೀವ ಪಾತ್ರವಾಗಿರುವುದರಿಂದಲೇ ದಿನದಿಂದ ದಿನಕ್ಕವು ದೇಶದಲ್ಲಿ ವಿಸ್ತರಿಸತೊಡಗಿವೆಯೆಂದು ತೋರುತ್ತದೆ. ಅವರು ನೀಡುತ್ತಿರುವ ಆಧ್ಯಾತ್ಮಿಕಾಶ್ವಾಸನೆಗಳಾದರು ರಾಜಕೀಯ ನಾಯಕರವಕ್ಕಿ ಯಾವುದೇ ರೀತಿ ಕಡಿಮೆಯಿಲ್ಲ. ಎಂಥ ಅಸಂತೃಪ್ತರನ್ನಾದರು ತೆಪ್ಪಗಾಗಿಸಿ ತಮ್ಮೆಡೆಗವು ನುಗ್ಗಿಸಿಕೊಳ್ಳುತ್ತವೆ. ಅವರ ಮಾತುಗಳೆಲ್ಲ ಸತ್ಯವೆನ್ನಿಸಿಕೊಳ್ಳಲೆಂದು ಯಾವನೇ ಶೋಕಹತನಾದರು ಹಾರೈಸದಿರಲಿಕ್ಕಿಲ್ಲ. ಬ್ರಹ್ಮಕುಮಾರರ ಸಂದೇಶಗಳೇನು ಸಾಮಾನ್ಯವೆ ! "ಮುರಳಿ ಮೂಡ್ವುದು ಧರೆಲಿ ಲಕ್ಷ್ಮೀರಮಣ ರಾಜ್ಯ | ಮುರಲಿಧಾರಿಯು ಸರ್ವ ಜನರಿಗಾಗುವ ಪೂಜ್ಯ | ಪರಮ ಗೀತಾ ಬೋಧಿ ಭಾವದೊಳವಿಭಾಜ್ಯ | ನಿರುತ ರಾಧಪ ಸಂಗ ಮನುಜ ಮನುಜಗೆ ಭೋಜ್ಯ || ಶಿವನು ಪಾರ್ವತಿ ಸಹಿತ ಜನರೊಳಾಗುವ ಹೃದ್ಯ | ಭವವ ನೀಗಲಿಕಾಗಿ ಭುವನರಾಜನು ಸದ್ಯ | ಕವಧಿ ಬರಲಿಹ ಬೇಗ ಸಾರಲೆಲ್ಲೆಡೆ ವಾದ್ಯ | ಭುವಿಯು ಸಗ್ಗವಗೈವ ಕಿರಣಗೊಳುವುವೊ ವೇದ್ಯ || ಬಾಳ ನಡೆಯನು ಕಲಿತು ಮಾಧವೀವನು ಪಾದ್ಯ | ಮೇಳವಾಗ್ವುದು ಭಕ್ತಚಯಕೆ ಸಂಭ್ರಮ ಚೋದ್ಯ | ಕೀಳು ಹುಸಿಯೋಡುವುದು ಮನಸಿಗಾಗುತ ಭೇದ್ಯ | ಗಾಳಿ ಸಮ ಜತೆಗೊಳುವ ಮುರಳಿ ಮಾಯಾವೈದ್ಯ || ಹರಿಯು ಬರುವ ಸುಖವ ತರುವ ಸಂಧ್ಯ ಮುರಲಿಧಾರಿ | ಪರಮ ರಾಧೆಯಿನಿಯ ಗೋಪಿರಮಣ ಶೈಲಧಾರಿ |

ನಿರುತ ಸತ್ಯಗೀತನು ಪಾರ್ಥಗೊಲಿದ ಪ್ರಾಜ್ಞ ಶೌರಿ । ಭರದಿ ಒರಲಿಕೆ ಬಂದನು ಪರ
ಪಲಿರುವ ನರರ ದಾರಿ ॥ ನಾಟ್ಯವಾಡಲಿರುವ ಕೃಷ್ಣ ಎಂಥವನ ನೋಡಿ ।
ನೋಟದಲ್ಲಿ ಬಗೆಯ ಸಂಧಿಸಿ ಕೊಳಲು ಹಿಡಿದ ಗಾಡಿ । ಕೂಟದಾಗಿಸುತ್ತ ಸುಖ
ಕೆ ಮನವ ನಯದಿ ತೀಡಿ । ನಾಟಿಸುವನು ದೈವಿಗುಣದ ಧನ್ಯ ಮುದವನೂಡಿ ।
ತಪಿಸುತಿಹಳು ಚೇತ ರಾಧೆ ಕ್ಷಣವಿಟ್ಟೆಯೇರಿ । ವಿಪುಲರಾಗಿ ಜೀವ ಗೋಪಿ
ಕೋಕಿತಿಹರು ವಿಲಾರಿ । ವಿಪಿನರೋದನನ್ನು ಕೇಳಿಯು ಮಂದಹಾಸ ಬೀರಿ । ಕೃಪೆ
ಯು ನಿಧಿಯು ಬೇಗ ಬಹನು ಬಾಳ ನಾರಿ ॥ ತೊಲಗಿತಿನ್ನು ಭೇದದಿಂದ ಪಡೆದಿ
ಕೊಂಡ ದುಃಖವು । ನಲಿವ ತಾಳಿ ಸಗ್ಗವಾಗಲಿಹುದು ಮತ್ತೆ ಭುವನವು । ನೆಲೆಯು
ನೆಲೆಯು ಚಿನ್ಮಯಾಶ್ರಯಾಗಿ ಹತ್ತು ದಿಕ್ಕಲಿ । ಜಲಜವದನ ಹೊಮ್ಮುವಸವ
ನಾದ ತುಂಬಿಕೊಳುವುದು ॥ ಕಣ್ಣನು ತೆರೆಯೇ ಕಳವಳವೃಳಿಯೆ ಬಂದಿಹ
ಚಿನ್ಮಣಿ ಕೃಷ್ಣಯ್ಯ ॥ ತಣ್ಣನೆ ಗಾಳಿಯು ಜತೆಯಲಿ ಹೊಮ್ಮಿಹ ಸದ್ರವವಾ
ಲಿಸಿ ಕೇಳಮ್ಮ । ಬಣ್ಣನೆ ಮೀರಿದ ಭಾಗ್ಯವು ಕರೆದಿರೆ ವಿರಹಿನ್ನೇತಕೆ ಸರಿಸಮ್ಮ ।
ಹುಣ್ಣಿಮೆ ಚಂದಿರ ಮೊಗವನು ತಳೆದನ ಸತ್ಕರಿಸಲು ತವೆ ಹೊರಡಮ್ಮ ॥ ಚಲಿ
ಸಿವ ಗಾಳಿಯು ಹೊಸ ಸುದ್ದಿಯ ತೆರೆ ಶೋಕದೊಳಿನ್ನೂ ಮುಳುಗುವರೆ । ಕಲೆ
ಮೆಯ ಕೃಷ್ಣನ ಕಂಕಣ ಝಣರಿಸೆ ವಿರಹವನಿನ್ನೂ ತಳೆಯುವರೆ । ನಲಿದು
ವಸಂತನು ಸಂಭ್ರಮದಲಿ ಬರೆ ತಾಪದೊಳಿನ್ನೂ ನಲುಗುವರೆ । ಕೊಲಲಿಕೆ ಭಿನ್ನ
ತೆ ಹರಿ ನಿಶ್ಚಯಿಸಿರೆ ರೋದನವಿನ್ನೂ ನಡೆಸುವರೆ ॥ ಮಾಧವ ಬಂದನು ದೇವರ
ದೇವನು ಬೇಗನೆ ಹೊರಡಿರಿ ದಾಸಿಯರೆ । ಬಾಧೆಯ ನೀಗಲು ದಯೆಯನು
ತಾಳಿದ ಸುಮುಸರ ತನ್ನಿರಿ ಚಾರೆಯರೆ । ಸಾಧನೆಗೊಲಿದನೊ ಹರಸಲು ಬಂದ
ನೊ ಸತ್ಕಾರೋತ್ಸವ ಮುಂದರಿಸಿ । ಭೇದನಗ್ಯೈದದ ನೀಚತೆ ಬಂದನೊ ಬೆಳಗಿರಿ
ನಾನಾ ಕಿರಣಾಳಿ ॥ ಸನನಾಗರಿಕತೆ ದಶಶಿರ ಮಥನಕೆ ಬಂದನೆ ಕೋದಂಡ
ರಾಮಾ । ಕಪಿಡಿಕ ದೈತ್ಯರ ಬಾಧೆಯನಳಿಸಿದ ಧೀರನು ನಾನಾ ಶುಭನಾಮಾ ।
ಕನದಲಿ ಶಿಶುವನು ಸಲಹಿದ ಧೀಮಣಿ ವೇದೋದ್ಧಾರಕ ಚಿರಮಹಿಮಾ । ಬವ
ಣೆಲಿ ತಪಿಸುತ ನೆನೆದಿಹ ಸುಜನರ ತಪ್ಪದೆ ಪಾಲಿಪ ಸನ್ನಿಯಮಾ ॥ ದುರಿತವು
ಸರಿವುದು, ಸಗ್ಗವು ಫಲಿಪುದು, ಭರಸುಖ ತಿರೆಯಲಿ ವಿಕಸಿಪುದು । ಪರಿಪರಿ
ರಿಪುಗಳ ಬಾಧೆಯು ತೊಲಗುತ ಚಿನ್ಮುದ ಎಲ್ಲಡೆ ಹಬ್ಬುವುದು । ನರರನು ತೊಳ
ಲಿಸುವಂತಹ ನೀಚತೆ ನಬಿಗಳು ನಿರ್ಮೂಲಾಗುವುವು । ಧರಿಸಿರಿ ಧೈರ್ಯವ

ಸುಜನವರೇಣ್ಯರಿ ಸಂಸ್ಕೃತಿ ಸಾಧನೆ ಮುನ್ನಡೆಸಿ|| ದೈವಿಗುಣಗಳ ಧರಿಸಿ ಸಾತ್ತ್ವಿ
ಕಾಹಾರದೊಡೆ | ಪಾವನನಾಗಿರುವಂಥ ಬ್ರಹ್ಮ ಪಥವನು ತಳೆದು | ಜೀವ-
ಜೀವವು ಸೌಖ್ಯಕಾರಿ ಸಾತ್ತ್ವಿಕಸಂಗ | ನಾಪೆಯಲಿ ಪೋಷಿಸಲಿ ರಾಜಯೋ-
ಗವ ಕಲಿತು||" ಎನ್ನುವಂತಹ ಸಾನ್ನೋತ್ಸವ, ಕ್ರೀಡಾಭ್ಯಾಸನೆಗಳು, ಜಾಕ್ಷಿ
ಗಳನ್ನೇ ಪರಿವರ್ತಿಸ ಬಲ್ಲ ಅಪ್ರತಿಮ ಸಂದೇಶಗಳೊಂದಿಗೆ ಧರಿಸು ಶ್ರೀಮಂತರು
ಹೆಚ್ಚು ಪ್ರಯೋಜನಗಳನ್ನು ಹೊಂದಲು ಶಕ್ಯವಾಗುವಂತೆ
"ವೀಚಿಮಯ ಜಗವಿದುವು, ಬಹು ದುಃಖಗಳ ನೆಲೆಯು ಗೋಚರಾ
ತೀತವಾದ ರೋಗಾಣುಗಳ ಬಲೆಯು | ನಾಚಬೇಕಿರಲಿಲ್ಲಿ, ಬಲುದೂರ
ವಿದೆ ಗುರಿಯು | ಮೋಚ ಬೀಡನ ಹೊಂದಲಿನಿ ಮೊರಡುವುದೆ ಸರಿಯು || ಅಲ್ಲಿ
ಹುದು ಸ್ವಾತಂತ್ರ್ಯ, ಪರಿಪೂರ್ಣ ಸುಖವು | ಸಲ್ಲದಿಹ ಭೋಗಗಳ ನೀಗಿರುವ
ಬಿತವು | ಗುಲ್ಲಿಲ್ಲ ತೀರದ ಚಿರಶಾಂತಿ ವಿಭವ| ಸ್ಖಲಿತವಾದಂಥ ನಾದಾನು
ಭಾವ||" ಎಂಬ ಗಗನನಿರ್ದೇಶನಗಳು ಕೂಡ ಬ್ರಹ್ಮಕುಮಾರ ಸಂಸ್ಥೆಯಿಂದ
ಪ್ರಾಪ್ತವಾಗುತ್ತವೆ.

### ೨೮ ಕಥಾನ್ವಿತ

೧. ಅದೊಂದೂರಲ್ಲಿ ದೊಡ್ಡ ಮೋಸಗಾರನೊಬ್ಬನಿದ್ದ. ಅವನಿಗೊಬ್ಬ ಮಗ ಹುಟ್ಟಿದಾಗ ಜಾತಕ ನೋಡಿದ ಜೋಯಿಸರು "ಈತ ದಿನಂಪ್ರತಿ ನೂರಾರು ಮಂದಿಗೆ ನೀರು ಕುಡಿಸುವವನಾಗುತ್ತಾನೆ" ಎಂದೇ ಹೇಳಬೇಕೆ! ಆತ ಬೆಳೆದಾಗ ಪ್ರಚಂಡನಾದ ಮೋಸಗಾರನಾಗುತ್ತಾನೆಂದೇ ಕೇಳಿದವರೆಲ್ಲ ಯೋಚಿಸಿದರು. ಆದರೆ ಹಾಗಾಗದೆ ಆತ ದೊಡ್ಡ ಉಪಾಹಾರಗೃಹವೊಂದರಲ್ಲಿ ವಿತರಣಾ ಸೇವೆಗೆ ಸೇರಿದ್ದ. ಜೋಯಿಸರ ಮಾತು ಮಾತ್ರ ಸುಳ್ಳಾಗಲಿಲ್ಲ.

೨. ಅದೊಂದು ಪೇಟೆಯಲ್ಲಿ ವೃತ್ತದ ಕಟ್ಟೆಯ ಮೇಲೆ ಕುಳಿತುಕೊಳ್ಳುವವರನ್ನೆಲ್ಲ ರಕ್ಷಕನೊಬ್ಬ ತಡೆದು ದೂರಸರಿಯಲು ಸೂಚಿಸುತ್ತಿದ್ದ. ಅನೇಕರು ಕೇಳುತ್ತಿರಲಿಲ್ಲ, ಯಾಕೆ ಹೀಗೆಂಬುದು ಅವರಿಗೆ ಗೊತ್ತಾಗುತ್ತಿರಲಿಲ್ಲ. ಆದರೆ ಬಹು ಸಮಯ ಕಳೆದಾಗ ಹಳ್ಳಿಗನೊಬ್ಬ ಭಾರೀ ಜಗಳವನ್ನೇ ಪ್ರಾರಂಭಿಸಿದ "ಇಲ್ಲಿ ಕುಳಿತರೆ ನಿನ್ನಪ್ಪನಾಸ್ತಿ ಹೇಗೆ ಮುಳುಗುತ್ತದೆ?" ಎನ್ನುತ್ತ ಸ್ವಲ್ಪವಾದರು ಮಾತಾಡಲಿಕ್ಕೂ ಅವಕಾಶ ನೀಡದೆ ರಕ್ಷಕನ ಮೇಲೆ ಕೈಯೆತ್ತಲಿಕ್ಕೆ ಸಿದ್ಧನಾದ. ಆತನನ್ನು ಠಾಣೆಗೇ ಕರೆದೊಯ್ಯಬೇಕಾಯಿತು. ಅಲ್ಲಿ

ಅಧೀಕ್ಷಕರೊಬ್ಬರು ತನಗೊಬ್ಬನೇ ಮಗನಿದ್ದು ಇಪ್ಪತ್ತನೇ ಹರೆಯದಲ್ಲಾತ ಕಟ್ಟೆಯ ಮೇಲೊಮ್ಮೆ ಕುಳಿತಿದ್ದಾಗ ತಪ್ಪ ಪಥದಲ್ಲೊಂದು ವಾಹನದ ಡಿಕ್ಕಿಗೆ ಗುರಿಯಾಗಿ ಧಾರಾಕಾರವಾಗಿ ರಕ್ತ ಸುರಿಯುತ್ತ ಕೆಲವು ಕ್ಷಣಗಳಲ್ಲೇ ಕುಳಿತೆಡೆ ಮೃತ್ಯುವಿಗೆ ಗುರಿಯಾದ ದುರಂತದ ಬಗ್ಗೆ ತಿಳಿಸಿದಾಗ ಗ್ರಾಮಸ್ಥನ ಮನಸ್ಸು ಮರು ಮಿಡುಕಿತು. ೩. ನಾರದನೊಮ್ಮೆ ಬಂದಿದ್ದಾಗ ಮಾಯಾರಾಣಿ ತನ್ನ ಕಾರ್ಯಗಳ ಹಿರಿತನದ ಬಗ್ಗೆ ಮಾತಾಡಿದಳು. ನಾರದ "ನಿನ್ನ ಕೆಲಸಗಳು ಅದೆಂಥ ಕಷ್ಟವಪ್ಪ ?" ಎಂದು ತಾತ್ಸಾರ ಪ್ರಕಟಿಸಿದ. "ಸ್ವಲ್ಪ ಹೊತ್ತು ಜತೆಗಿದ್ದರೆ ನಿನಗೇ ಸ್ಪಷ್ಟವಾದೀತು" ಅಂದಳು ಮಾಯೆ. ಕೆಲವಾರು ಕ್ಷಣಗಳು ಹೊರಳಿದಾಗ ಮನುಷ್ಯನೊಬ್ಬ ಪ್ರವೇಶಿಸಿದ. ನಮಸ್ಕಾರದೊಂದಿಗೆ "ಅಮ್ಮಾ, ನನ್ನೂರನ್ನು ಸಾವಿರಾರು ಮಂದಿ ನನ್ನೂರು, ನನ್ನೂರೆಂದು ಹೇಳುತ್ತಿದ್ದಾರೆ. ಅದು ಯಾರೂರೋ, ಯಾರಪ್ಪನೂರೋ ಗೊತ್ತಾಗುತ್ತಿಲ್ಲ. ಆದ್ದರಿಂದ ಹುಟ್ಟಿದೂರನ್ನು ನಲ್ಮೆಯಿಂದ ನೀನು ನನ್ನೂರಾಗಿ ದಾಖಲಾತಿಗೊಳಿಸಬೇಕು" ಎಂಬುದಾತನ ಕೋರಿಕೆ. "ಆಗಲಪ್ಪ" ಎನ್ನುತ್ತ ಆತನನ್ನು ಕಳಿಸಿದಳು ಮಾಯೆ "ಈತ ನನಗೆ ಅತ್ಯಂತ ಆಪ್ತನಾದಾತ. ಆದ್ದರಿಂದ ಇಚ್ಛಿಸಿದಾಗ ಬರುವ ಭಾಗ್ಯವನ್ನು ಕೊಟ್ಟಿದ್ದೇನೆ. ಈತನಲ್ಲಿರುವ ಜೀವಿಗಳು ಕೂಡ ನನಗೆ ಪ್ರಿಯವಾದುವು" ಅಂದಳು. ಸ್ವಲ್ಪ ಹೊತ್ತಾದಾಗ ಸೂಕ್ಷ್ಮ ಕ್ರಿಮಿಗಳ ಸಾಲು ಸಾಲೇ ಪ್ರವೇಶಿಸ ತೊಡಗಿತು. ಅವುಗಳ ಒಟ್ಟು ಸಂಖ್ಯೆ ಲಕ್ಷವನ್ನು ಕೂಡ ಮೀರುವಂತಿತ್ತು. "ತಾಯೀ, ರಾಮಣ್ಣನ ಶರೀರದಲ್ಲಿ ನಾನು ಸ್ವಚ್ಛಂದವಾಗಿ ಸಂಚರಿಸುತ್ತಿದ್ದೇನೆ. ಆದ್ದರಿಂದ ಅದನ್ನು ನನ್ನೂರೆಂದು ದಾಖಲುಗೊಳಿಸಬೇಕು" ಎಂದು ಅವುಗಳಲ್ಲಿ ಪ್ರತಿಯೊಂದರ ನಿವೇದನೆ. ಮಾಯೆ "ಹಾಗಾಗಲಿ" ಎನ್ನುತ್ತ ಎಲ್ಲವನ್ನೂ ಕಳಿಸಿದಳು. ನಾರದ ಅವಾಕ್ಕಾದ. "ಅಲ್ಲ, ಸಣ್ಣ ಶರೀರವೊಂದರಲ್ಲಿ ಇಷ್ಟೊಂದು ಜೀವಿಗಳ ಸಮುದಾಯವಿರಬೇಕಾದರೆ ಅತ್ಯಂತ ವಿಶಾಲವಿರುವ ಸೃಷ್ಟಿಯಲ್ಲಿನ ವಿಪುಲ ಜೀವಿಗಳ ಜನನ, ಮರಣ ದಿನವಹಿಯ ಸ್ಥಿತಿಗತಿಗಳ ವ್ಯವಸ್ಥೆಯನ್ನು ನೋಡಿಕೊಳ್ಳುವುದೆಂದರೆ ಬಹಳಷ್ಟು ಅದ್ಭುತವಾದ ಹೊಣೆಯೇ ಸರಿ". ಅಂದ. "ಈಗಾದರು ಗೊತ್ತಾಯಿತಲ್ಲ" ಅಂದಳು ಮಾಯಾದೇವಿ ೪. ಜಗದೀಶ ನೋಡಿದ, ನೋಡಿದ, ನೋಡಿದ, ಕೋಣೆಯೆಲ್ಲ ಚಿಲ್ಲರೆಗಳ ರಾಶಿಯೇ ತುಂಬಿಕೊಂಡಿದೆ. ವ್ಯವಹಾರಗಳಲ್ಲಿ ಚಿಲ್ಲರೆಗಳ

ಅಭಾವ ಹೆಚ್ಚುತ್ತಿದ್ದಂತೆ ಪೇಟೆಯಲ್ಲಿ ಯಾರಲ್ಲೂ ಚಿಲ್ಲರೆಯೇ ಇರುವಂತಾಗಬಾರದು, ಉಪಾಹಾರಗೃಹಗಳ ಗ್ರಾಹಕರೆಲ್ಲ ತಮ್ಮಲ್ಲಿಗೇನೇ ಬರುವಂಥ ದಿನಗಳೊದಗಬೇಕೆಂದು ಬಗೆಯುತ್ತ ಯಾರಿಗೂ ತಪ್ಪಿ ಸಹ ಚಿಲ್ಲರೆಗಳನ್ನು ಕೊಡದೆ, ಬಲವಂತಗೊಳಿಸಿ ಬಂದವರೆಲ್ಲರಿಂದಲೂ ಅವುಗಳನ್ನು ಪಡೆದು ಕರಡಿಗೆಗಳು, ಚೀಲಗಳು, ಪೆಟ್ಟಿಗೆಗಳಲ್ಲಿ ಕ್ರಮವಾಗಿ ಸಂಗ್ರಹವನ್ನು ಬೆಳೆಸಿ ಕೊನೆಗವಕ್ಕೊಂದು ಕೋಣೆಯನ್ನೇ ಮೀಸಲಾಗಿಸಿದ್ದವ ಜಗದೀಶ. ಈ ಮಧ್ಯೆ ತಮ್ಮಲ್ಲಿರುವ ಚಿಲ್ಲರೆಗಳ ಸಂಗ್ರಹದ ಕುರಿತು ತಿಳಿಸಬೇಕೆಂದು ಸರಕಾರವೊಂದು ಆಜ್ಞೆ ಹೊರಡಿಸಿತು. ಗೊತ್ತಾದರೆ ತೊಂದರೆಯುಂಟಾದೀತೆಂದು ಆ ಬಗ್ಗೆ ನಿರ್ಲಕ್ಷ್ಯ ವಹಿಸಿದ ಜಗದೀಶ. ಮತ್ತೆ ದಾಖಲು ಪಡೆದವರಿಂದ ಚಿಲ್ಲರೆಗಳ ವಿನಿಮಯವಾಗಿಕೊಂಡು ಸರಕಾರ ವ್ಯವಹಾರಗಳಲ್ಲಿ ಚಿಲ್ಲರೆಗಳ ಚಲಾವಣೆಯನ್ನೇ ಸ್ತಬ್ಧಗೊಳಿಸಿತು. ಬಾಯಿ ಬಡಿದುಕೊಳ್ಳುತ್ತ ಜೋರಲಾಗಿ ಕೆಡೆದು ಚೀರತೊಡಗಿದ್ದ ಜಗದೀಶ. ೫. ದೊಡದೂರು ಹೋಕ್ಕಿದ್ದ ಪುಸ್ತಕಗಳ ವಿಕ್ರಯವಾಗದೆ ಸೋತ ಸಾಹಿತಿ ನಾಲ್ವರು ಪರಿಚಿತ ಶಿಕ್ಷಕರನ್ನು ನೆನೆದು ವಿದ್ಯಾಲಯದೆಡೆ ನಡೆದ. ಅವರಲ್ಲಿಬ್ಬರು ವರ್ಗ ಹೊಂದಿರುವುದಾಗಿ ತಿಳಿಯಿತು. ಮತ್ತಿಬ್ಬರು ಹಣ ಕೊಡುತ್ತೇವೆಂದು ಕೂತುಕೊಳ್ಳಿಸಿ ಮಾತು ಮುಂದರಿಸಿದರು. ಅಷ್ಟರಲ್ಲೇ ಭತ್ಯದ ಪ್ರಮಾಣ ಹೆಚ್ಚಾದ ಬಗ್ಗೆ ಪತ್ರವೊಂದವರ ಕೈಸೇರಿತು. ಆ ಕುರಿತು ಬಿರುಸಾದ ಚರ್ಚೆ ಪ್ರಾರಂಭವಾಗಿ ತಾಸೆರಡರ ಸಮಯವನ್ನು ದಾಟಿತು. ಅದು ಸಂಜೆಯಾದರೂ ಮುಗಿಯುವ ಲಕ್ಷಣ ಗೋಚರಿಸಲಿಲ್ಲ. ಮಧ್ಯಾಹ್ನದೂಟಗೈದಿರದೆ, ಬೆಳಗ್ಗೆ ತಿಂಡಿ ತೆಕ್ಕೊಂಡಿರದೆ ಬಳಲಿದ್ದ ಸಾಹಿತಿ ದಿಗ್ಭ್ರಾಂತಿ ಮಿತಿಮೀರಿ ಶಿರಶೂಲೆ ವಿಸ್ತೃತಗೊಂಡು ಹೃದಯಾಘಾತಕ್ಕೇನೇ ಬಲಿಯಾಗಿ ಕುಸಿದುಬಿದ್ದಿದ್ದ. ೬ ಅದೊಂದೂರಲ್ಲಿ ಸಾಮೂಹಿಕ ಸ್ಥಾನಗಳಲ್ಲಿನ ಮಾಲಿನ್ಯಗಳನ್ನು ತಾವೆಲ್ಲರು ಜತೆಗೂಡಿ ನೀಗುವುದೆಂದು ಜನರೊಂದು ತೀರ್ಮಾನಕ್ಕೆ ತಲುಪಿದರು. ಅದೇ ರೀತಿ ಮರುದಿವಸದಿಂದ ನಿರ್ಮಲೀಕರಣದ ಕಾರ್ಯಗಳು ಉತ್ತಮವಾಗಿ ಸಾಗತೊಡಗಿದುವು. ಬೇಗನೆ ಸುಂದರನಾದೊಂದ ಊರು ತಲೆಯೆತ್ತಿತು. ಆದರೆ ಮತ್ತೆ ಕೆಲವೇ ದಿನಗಳಲ್ಲಿ ಅಹಂಕಾರದ ಭಾವನೆಗೇಳುತಿ "ಇಲ್ಲಿನ ಕೊಳೆ ನೀನೆಸೆದದ್ದು ನೀನೇ ಬಾಚಿಗೊಳಿಸಬೇಕು" "ಆ ಭಾಗದ

ಮಾಲಿನ್ಯ ನನ್ನಿಂದಾದುದಲ್ಲ. ನಾನೇಕೆ ಗುಡಿಸಲಿ ?" ಎನ್ನುವಂತಹ ಜಗಳಗಳು ಪ್ರಾರಂಭವಾದುವು. ಬಳಿಕ ಕೆಲವೇ ದಿನಗಳಲ್ಲಿ ಮೊದಲಿನ ಪ್ರಕಾರದಲ್ಲೇ ಊರು ಮಾಲಿನ್ಯಗಳನ್ನು ಮೈದಳೆದಿತ್ತು. ಪ್ರಜೆಗಳಲ್ಲಿ ಸಮರ್ಪಕವಾದ ಹೊಣೆಯ ಪ್ರಜ್ಞೆಗಳು ವಿಸ್ತೃತವಾಗದಿದ್ದರೆ ಸಾಮೂಹಿಕ ಸ್ಥಾನಗಳು ಶುಚಿಯಾಗಿರುವುದು ದುಸ್ಸಾಧ್ಯವಾದೀತೆಂಬುದು ತಾನಾಗಿ ವ್ಯಕ್ತವಾಯಿತು. ಹೊಲೆಯರ ಕಾಯಕಗಳನ್ನು ಹಾಗು ನವನಾಗರಿಕತೆಯಲ್ಲಿ ಬೌದ್ಧಿಕ ಕಾರ್ಯಗಳನ್ನು ಅಸ್ಪೃಶ್ಯತೆಗೆ ಸರಿಸಿರುವ ಮಾನವ ಸಾಮಾಜಿಕ ಜಾಗಗಳ ಹೊಲಸುಗಳನ್ನು ಮಾತ್ರ ಯಾವುದೇ ತಿರಸ್ಕಾರವಿರದೆ ಸ್ಪೃಶ್ಯತೆಯ ಭಾಗ್ಯದೊಂದಿಗೇ ಮುನ್ನಡೆಸುವುದು ವೈಚಿತ್ರ್ಯಪೂರ್ಣವಾದೊಂದು ಸಂಗತಿಯೇ ಸರಿ. ಬಾಳಿನಾರೋಗ್ಯದಲ್ಲಿ ಅವುಗಳ ನಿವಾರಣೆಯ ಪ್ರಾಧಾನ್ಯವನ್ನು ಆಧುನಿಕರಾದರು ಗ್ರಹಿಸಿಕೊಳ್ಳಲು ಸಮರ್ಥರಾಗಲಿಲ್ಲ. ೭. ಉಪಾಹಾರಗೃಹದವನೊಬ್ಬನಿಗೆ ಸಾಹಿತಿಯನ್ನು ಸಹಕಾರಕ್ಕಾಗಿ ಮತ್ತೊಮ್ಮೆ ಬರಹೇಳಿ ಹಾಗಾತ ಬಂದಾಗ "ನನಗೆ ಪುರುಸೊತ್ತಿಲ್ಲ. ಹೋಗಯ್ಯೋ" ಅನ್ನುವುದೇ ರೀತಿಯ ವಿಷಯವೆನಿಸಿತು. ಜನತಾ ಪಕ್ಷ ಅಧಿಕಾರಕ್ಕೆ ಬಂದ ಮೇಲೆ ಹತ್ತಿರವಿದ್ದ ವಾಹನ ನಿಲ್ದಾಣವನ್ನು ದೂರ ಪಟ್ಟಣದ ಹೊರಭಾಗಕ್ಕೆ ಸ್ಥಳಾಂತರಿಸಿತು. ಮತ್ತೆ ಗ್ರಾಹಕರೇ ಸಿಗದಂತಾಗುತ್ತ ಆತನ ಸಂಪನ್ನತೆ ಕೂಡ "ಹೋ ಗಯಾ" ಆಗಿ ನಿಧಾನವಾಗಿ ದೂರವೇಹೋಯಿತು. ಅಪ್ರಾಮಾಣಿಕರಿಗೆ ದುಃಖ ಬುತ್ತಿಯಲ್ಲಿರುವ ಆಹಾರವೆಂಬುದನ್ನು ಸ್ಥಿರೀಕರಿಸಿತು. ೮. ಆಧುನಿಕ ಮಾನವನ ವಿನಾಶಗಾಮಿ ವ್ಯಕ್ತಿತ್ವವನ್ನು ಪ್ರತಿಬಿಂಬಿಸುವ ರೀತಿಯಲ್ಲೇ ಒಬ್ಬ ಕೊಂಬೆಯ ಮೇಲೆ ಕುಳಿತು ಬುಡವನ್ನು ಕಡಿಯತೊಡಗಿದ್ದ. ಸಾಹಿತಿಯೊಬ್ಬ ಬಂದು "ಪುಸ್ತಕ ಬೇಕೇ?" ಎಂದು ಕೇಳಿದ "ಹೋಗೆಲೋ ಪುಸ್ತಕದಿಂದ ನನಗೇನು ಪ್ರಯೋಜನ ?" ಎಂದನಾ ಮೂಢ. ಸಾಹಿತಿ ಮಾತನಾಡದೆ ಮುನ್ನಡೆದ. ಆತ ಹಿಂಬರುತ್ತಿದ್ದಾಗ ಮುದಿತ ನೆಲಕ್ಕುರುಳಿ ಗಾಯಗೊಂಡಿದ್ದ. ಸಾಹಿತಿ ಆತನಿಗುಪಚಾರ ನೀಡಿ 'ಕೊಂಬೆಯ ಮೇಲೆ ಕುಳಿತು ಬುಡವನ್ನು ಕಡಿಯಬಾರದೆಂಬುವೇ ಈ ಪುಸ್ತಕದಲ್ಲಿನ ಮೊದಲ ನೀತಿ. ನೀನಿದಕ್ಕೆ ಮಾನ್ಯತೆ ಕೊಟ್ಟಿದ್ದರೆ ಗಂಡಾಂತರ ಖಂಡಿತವಾಗಿ ತಪ್ಪಿರುತ್ತಿತ್ತು" ಅಂದ. ಮನೆ ಸುಟ್ಟಾದ ಮೇಲೆ 'ಬುದ್ಧಿಯನ್ನಾದರಿಸಿದರೆ ಹೋದ ಸಂಪತ್ತೇನೋ ಮರಳದು; ಆದರೆ ಮುಂದಿನ ವಿಪತ್ತನ್ನಾದರು ತಡೆದೀತಷ್ಟೆ.

ರ. ಚಿತ್ರಗುಪ್ತನ ಮುಂದೆ ಒಬ್ಬೊಬ್ಬರಾಗಿ ವ್ಯಕ್ತಿಗಳನ್ನು ಭಟರು ತರತೊಡಗಿದ್ದರು. "ಈತ ಸಾಮಾಜಿಕ ಸಮ್ಮತಿಯನ್ನು ಹೊಂದಿರುವ ಕಾರ್ಯ ಗಳನ್ನೇ ನಡೆಸಿದ್ದಾನೆ. ತನ್ನೆಸಕದಿಂದ ಬೇರೆಯವರ ಶರೀರ, ಮನಸ್ಸುಗಳನ್ನು ತಪ್ಪಿ ಸಹ ನೋಯಿಸಿಲ್ಲ. ಸಮೂಹಕ್ಕೆ ಹಿತಕಾರಿಯಾಗುವ ಸೇವೆಗಳನ್ನು ಬಹಳಷ್ಟು ಸಲ್ಲಿಸಿದ್ದಾನೆ" ಎಂದೊಬ್ಬನ ಕುರಿತು ವಿವರಿಸಿದರು. "ಸ್ವರ್ಗ ಕ್ಕೊಯ್ಯಿರಿ" ಎಂದು ಚಿತ್ರಗುಪ್ತ ಅಜ್ಞಾಪಿಸಿದ. "ಈತನೇನೋ ಗೈದಿರುವುದು ಸಮಾಜ ಸಮ್ಮತಿಸಿರುವ ಕಾರ್ಯಗಳನ್ನೇ. ಆದರೆ ಬೇರೆಯವರ ಶರೀರ, ಮನಸ್ಸು ಗಳಿಗೆಲ್ಲ ಬಹಳವಾಗಿ ಹಾನಿಯುಂಟಾಗಿಸಿದ್ದಾನೆ. ಬಾಳ್ವೆಯಲ್ಲಿ ತಪ್ಪಿ ಸಹ ಸಮುದಾಯಕ್ಕೆ ಹಿತಕಾರಿಯಾದ ಕಾರ್ಯವನ್ನು ಕೈಗೊಳ್ಳಲಿಲ್ಲ" ಎಂದು ಮತ್ತೊಬ್ಬನ ಕುರಿತು ತಿಳಿಸಿದರು. "ಕೂಡಲೇ ನರಕಕ್ಕೆ ತಳ್ಳಿ" ಚಿತ್ರಗುಪ್ತ ವಿಧಿಸಿದ. "ಈತ ಸಂಪಾದನೆಯನ್ನೇನೋ ಉತ್ತಮವಾದ ರೀತಿಯಲ್ಲೇ ನಡೆಸಿ ದ್ದಾನೆ. ಆದರೆ ಕುಟುಂಬಪೋಷಣೆಗು ಸರಿಯಾದ ಲಕ್ಷ್ಯವೀಯದೆ ಅದನ್ನೆಲ್ಲ ವ್ಯಯಿಸಿರುವುದು ವಿವಿಧ ದುಶ್ಚಟ, ದುರಭ್ಯಾಸಗಳಿಗೇನೇ" ಭಟರಿನ್ನೊಬ್ಬನ ಕುರಿತಂದರು. "ಸ್ವಲ್ಪ ಕಾಲ ಸ್ವರ್ಗದಲ್ಲಿರಿಸಿ ಮತ್ತೆ ನರಕಕ್ಕೊಯ್ಯಿರಿ" ಚಿತ್ರಗು ಪ್ತನಾಜ್ಞೆ. "ಈತ ಹಣವನ್ನರ್ಜಿಸಿರುವುದು ಭ್ರಷ್ಟ ವಿಧಾನಗಳಿಂದಲೇ. ಆದರೆ ಅದನ್ನೆಲ್ಲ ವಿಪುಲ ಸಾತ್ತ್ವಿಕ ಕಾರ್ಯಗಳಿಗಾಗಿ ಸಮಾಜೋಪಯೋಗಗಳಿಗಾಗಿ ನಿರತವಾಗಿ ಬಳಸಿದ್ದಾನೆ" ಮತ್ತೊಬ್ಬನ ಶೀಲದ ಕುರಿತು ಭಟರರುಹಿದರು. "ಸ್ವಲ್ಪಕಾಲ ನರಕದಲ್ಲಿರಿಸಿ ಮತ್ತೆ ಸ್ವರ್ಗಕ್ಕೆ ಕರೆದೊಯ್ಯಿರಿ" ಚಿತ್ರಗುಪ್ತ ಆಜ್ಞಾಪಿಸಿದ. ಹೀಗೆ ವಿವಿಧ ರೀತಿಗಳಲ್ಲಿ ವಿಚಾರಣೆ ಮುಂದರಿಯಿತು, ೧೮. ಭಗ ವಂತನಲ್ಲಿ ಬೆರೆತಿದ್ದ ಜೀವಾಂಶವೊಂದಕ್ಕೆ ಬಹುದೂರ ಪ್ರಪಂಚದಲ್ಲಿ ವ್ಯಾಪಿಸಿ ರುವ ಮಾಯಾಕರ್ಷಣೆಗಳ ಕಡೆಗೆ ವಿಶೇಷವಾದ ಶಕ್ತಿ ಬೆಳೆಯತೊಡಗಿತು. ಅದನ್ನರಿತ ಪರಮಾತ್ಮ ತನ್ನಿಂದದನ್ನು ಪ್ರತ್ಯೇಕಿಸಿ ಸಾಗರದಿಂದ ಬೇರ್ಪಡೆಯಾದ ಬಿಂದುವಿನ ರೀತಿ ಜಗತ್ತಿಗೆ ಕಳಿಸಿದ. ಅದು ಸ್ತ್ರೀ ರೂಪದಲ್ಲಿ ಭೂಮಿಯಲ್ಲಿ ಜನಿಸಿತು. ಆಕೆಗೆ ಕೊರಮೆಯೆಂಬ ಹೆಸರನ್ನಿರಿಸಲಾಯಿತು. ಕೊರಮೆ ಬಾಲ್ಯಾವಸ್ಥೆಯಿಂದ ಬೆಳೆಯುತ್ತಿದ್ದ ಹಾಗೆ ತನ್ನ ಶರೀರವೇ ಪ್ರಧಾನ ವೆಂದು ತಿಳಿದು ಅದರ ಸುಖಕ್ಕಾಗಿ ಆಗಾಗ ಸುಳ್ಳಾಡುತ್ತಿರುವುದು, ಅಪ್ರಾ ಮಾಣಿಕ ಕಾರ್ಯಗಳನ್ನು ಗೈಯುವುದು ಮೊದಲಾದುವನ್ನು ನಡೆಸತೊಡಗಿದಳು

ತಾರುಣ್ಯವನ್ನಡರಿದಾಗ ಆಕೆಯ ಲಗ್ನವಾಗಿ ಕೆಲವು ವರ್ಷಗಳಲ್ಲಿ ಮೂವರು ಮಕ್ಕಳು ಜನಿಸಿದರು. ಮಕ್ಕಳೆಂದರೆ ಬಾಡಿಗೆಯ ಮನೆಯಿದ್ದ ಹಾಗೆ, ಬೇಕೆನಿಸಿದ ಗುಣಗಳೊಡನೆ ಇಚ್ಛಿಸಿದ ಪ್ರಕಾರದವರು ಜನಿಸುವುದಿಲ್ಲವೆಂಬನ್ನು ಆಕೆ ಗಮನಿಸದಾದಳು. ತನ್ನಿಂದಲೇ ಉದ್ಭವಿಸಿದರೆಂಬ ಭ್ರಾಂತಿಯಲ್ಲಿ ವ್ಯಾಮೋಹವನ್ನು ಹೆಚ್ಚಿಸಿಕೊಂಡು ಅವರ ಸುಖಗಳ ಸಲುವೆಂದು ಹಲವಾರು ಕಪಟಾಚರಣೆ, ಅನ್ಯಾಯಗಳನ್ನು ಮುನ್ನಡೆಸತೊಡಗಿದಳು. ಆದರೆ ದೊಡ್ಡವರಾಗಿ ಬೆಳೆದಾಗ ಆಕೆಯ ಕನಿಷ್ಠ ಹಿತವಾದರು ಅವರ ಗಮನದಲ್ಲಿ ನೆಲಸಿಲ್ಲವೆಂಬುದು ಸ್ಪಷ್ಟವಾಯಿತು. ಕ್ಷಣಿಕ ಸುಖಗಳಿಂದ ರಂಜಿಸಿದ್ದ ದೇಹ ಅವೆಲ್ಲ ಶಾಶ್ವತವೆಂಬ ಭ್ರಮೆಗಳನ್ನು ಮೂಡಿಸಿದ್ದು ಕೊನೆಗೀಗ ಸುಖರಹಿತ ಸ್ಥಿತಿಯೆಡೆಗೆ ಸಾಗಿಸುತ್ತ ವಂಚಕಶೀಲವನ್ನು ನಿಚ್ಚಳಗೊಳಿಸಿತು. ಇವೆಲವುಗಳಿಂದ ಬಾಳೊಂದು ಮಾಯೆಯ ಸ್ವಪ್ನವ ತೀವ್ರ ಆಕೆಯಲ್ಲುಂಕುರಿಸತೊಡಗಿತು. ವಿತ್ತಪತ್ರಗಳು ದೊರೆತಾಗ ಮುಖದಲ್ಲಿ ವ್ಯಕ್ತವಾಗುತ್ತಿದ್ದ ಸುಖಾನ್ವಿತ ಕಲ್ಪನೆಗಳ ಹಿಗ್ಗು ತನ್ನಿಂದ ತಾನಾಗಿ ಮಾಯವಾಯಿತು. ದಿನದಿಂದ ದಿನಕ್ಕೆ ಭಕ್ತಿ ಬೆಳೆಯುತ್ತ ವಿರಕ್ತಿಯು ದೃಷ್ಟಿಯೊಡನೆ ವೃದ್ಧಾಪ್ಯದಲ್ಲಿ ಪಕ್ವವಾದ ಜೀವ ಶಾಂತವಾದ ಮೃತ್ಯುವಿನ ಮೂಲಕ ಪರಮಾತ್ಮನೊಂದಿಗೆ ಚೇತನನವನ್ನು ಲೀನಗೊಳಿಸಿತು.

## ೪. ಕೆಲವಿಲ್ಲಿ ಪ್ರಶ್ನೋತ್ತರಗಳು

ಅ ವೈಯಕ್ತಿಕ : ೧ "ಯಾವೂರು?" 'ಇದೇನ್ರೀ ? ಊರು ಯಾವುದೊಂತ ನಿಮಗೆ ಹೇಳಿಕೊಡಬೇಕಾಯಿತ್ತೇನು ? ಇದು ಊರಲ್ವೇನು ? ಇಲ್ಲಿರುವುದೆಲ್ಲ ಕಾಡು ಮಿಗಗಳೊಂತ ತಿಳ್ಕೊಂಡ್ರಾ?' ೨. 'ನಿಮ್ದು ಯಾವೂರು?' ನನ್ಗ್ಯಾಂತ ಯಾವೂರೂ ದಾಖಲಾಗಿಲ್ಲ ದೊರೆಗಳೇ. ಹಾಗೇನಾದರಿದ್ರೆ, ಇಷ್ಟು ಸಹಾನುಭೂತಿಯುಳ್ಳ ನಿಮ್ಗೂನೂ ಒಂದು ಚೆನ್ನಾದ ಮನೆ ಪಕ್ಕದಲ್ಲಿ ಕೊಡಿಸ್ತಿದ್ದೆ' ೩. "ಯಾವೂರು ಸ್ವಾಮಿ?" "ಊರು ದೊಡ್ಡ ದೊರೆಗಳಿಗೇ ಹೋಗಿದ್ರೀ. ಊರು ಹೋಗ್ಲಿ, ಮಾನಸತಿಯಾದರು ಸಿಕ್ತೀತೇನೂಂತ ಊರೂರು ಮಡುಕಾಡ್ತಿದೀನ್ರೀ" ೪. "ಅಲ್ರಿ, ಊರು ಕೇಳದ್ರೆ ಪ್ರತ್ಯುತ್ತರಿಸೋದಿಲ್ವಲ್ಲ?" "ವಾಹಾ ಷಿನಾನವರುತರಿಗೇನೇ ಊರಿಲ್ಲ ನೆಲೆಯಾಗ ನಮ್ಮಂಥವರಿಗೆ ಊರು,

ಮನೆ, ಮಠ ಎಲ್ಲಾನೂ ಹೋಗ್ಬಿಟ್ವು. ಮತ್ತೇನುತ್ತರಿಸ್ಲಿ. ಇರೋ ಎರಡು ಕಾಸೂನೂ ಕೈಲಿಲ್ಲಾಂತಾದ್ರೆ ನಿಮ್ಮ ಹಾಗೆ ಕೇಳೋದು ಸಹ ಸಿಗ್ಲಿಕ್ಕಿಲ್ಲ. ೫. "ಯಾವೂರ್ರೀ?" 'ಯಾರ್ದು ನನ್ದೇನು ? ಒಂದು ರೀತಿಯಲ್ಲಿ ಲೋಕವೆಲ್ಲ ನನ್ನೂರು ಸ್ವಾಮಿ.ಅದ್ರಲ್ಲಿ ನೀವಿಚ್ಚಿಸೋ ಪ್ರತ್ಯೇಕವಾದ ಹೆಸ್ರು ಹೇಗೆ ಹೇಳ್ಲಿ?' ೬. 'ನೀವಿವತ್ತು ಹೋಗ್ತೀರ?' 'ಕೈಗೊಂಡ್ರೋ ವ್ಯವಹಾರದಲ್ಲಿ 'ಈಗ ಬನ್ನಿ' 'ಆಗ ಬನ್ನಿ' "ಹೋಗಿ ಬನ್ನಿ" ಎಂದು ಸುತ್ತಾಡಿಸೋರ ಹಾವಳಿ ಜಾಸ್ತಿ ಆದ್ದರಿಂದ ನಿಖರವಾಗಿ ಹೇಳೋಕಾಗೋಲ್ಲ' ೭. 'ಪುಸ್ತಕ ಪುಸ್ತಕಾಂತ ತಲೆ ತಿನ್ತೀರ?' 'ನಿಮ್ಮ ತಲೆಯಲ್ಲಿರೋ ವಸ್ತುಗಳ ಬಗ್ಗೆ ದುರ್ವಿಷಯಗಳಿಗಿರುವಷ್ಟು ಕ್ರೋಧ ನನ್ಗಿಲ್ಲ ಸ್ವಾಮಿ ನಿಮ್ಮ ತಲೇನೆಲ್ಲ ತಿಂದ್ಬಿಟ್ರೆ ಅವಕ್ಕೆ ಧಾರಾಳವಾದ ದುಡ್ಡಿರ್ಗತ್ತೆ. ನಿಮ್ಮ ತಲೆ ಅಷ್ಟಿಷ್ಟಾದ್ರು ಉಳಿದಿದ್ರೇನೇ ಕನಿಷ್ಠ ಪ್ರಮಾಣದಲ್ಲಾದ್ರು ನಾವ್ ಸಹಕಾರ ಪಡೆಯೋದು. ಕಾಗೆ ಪ್ರತಿಬಿಂಬದೊಡನೆ ರೇಗುವಂತೆ ತಪ್ಪಾರಿ ಹಿಡಿದಿದೆ ನಿಮ್ಮ ಹಗೆ'. ೮. 'ನೀವು ನಗರಕ್ಕೆ ಹೋದರೆ ಕೋಟಿ ರೂಪಾಯಿ ಸಂಪಾದಿಸಬಹುದು' ಹೂ ಹಡಗಲಿಯಲ್ಲೊಬ್ಬ ವ್ಯಾಪಾರಿ 'ನಿಮ್ಮಂತಹ ಗಣ ಜೀವಿಗಳಿಂದಲೋ?' ೯. ಬರಿಗೈಯಲ್ಲಿ ಹತ್ತು ರೂಪಾಯಿ ಗಳಿಸುವ ದಾರಿ ನಿಮಗೆ ಸೂಚಿಸ್ತೀನಿ. ತಿಪಟೂರಿನಲ್ಲೊಬ್ಬ ಪ್ರಾಥಮಿಕ ಮುಖ್ಯೋಪಾಧ್ಯಾಯ. ಆ ಬಗ್ಗೆ ಮನಸ್ಸು ಮಣಿಸಿ ದುಡಿಯಲೇಬೇಕೆಂದಿಲ್ಲ ಸ್ವಾಮಿ. ಬರೀ ಮಾತನಾಡಿದರೆ, ಬರೆಯುವುದನ್ನೇ ಉದ್ಯೋಗವಾಗಿಸಿದರೆ, ಯಾರಿಂದಲೋ ಬಂದ ತಿಳಿವುಗಳನ್ನು ಯಾರಿಗೋ ದಾಟಿಸಿದರೆ ನವನ್ಯವಸ್ಥೆ ಧಾರಾಳವಾಗಿ ಹಣ ಕೊಡುತ್ತೆ. ಆದರೆ ಪ್ರಕಾಶನ ಉಳಿಸೋಣಾಂತ ಪ್ರಯತ್ನಿಸ್ತಿದ್ದೇನೆ. ೧೦ 'ಸರಿಯಾಗಿ ಮಾತಾಡಲು ಬಾರದಿದ್ರೆ ಚಿತ್ರದುರ್ಗದ ಜನ ನಿಮ್ಮನ್ನೋಡಿಸ್ತಾರೆ' ಒಬ್ಬ ಅಭಿಯಂತರ 'ಹೌದೋ ಸ್ವಾಮಿ ? ಅಷ್ಟೊಂದು ದೊಡ್ಡ ಮಾತುಗಾರರಿದ್ದೂ ಅಂತಹ ವಿಚಿತ್ರಶೀಲದವರೇ ? ಹುಂ, ಓಡಿಸಿಯಾವು ಸ್ವಾಮಿ ಓಡಿಸಿಯಾವು, ನೀವು ನಚ್ಚಿದ ಬೆಡಗುಗಳೇ ಕೊನೆಗೊಂದಿನ ವಿನಾಶಕ್ಕೆ. ೧೧. ನಿಮ್ಮ ಚೀಲದಿಂದ ತೊಂದರೆಯಾಗ್ತದೆರೀ–ಬರೀ ಚೀಲ ಯಾಕೆ ಸ್ವಾಮಿ ? ಬಡವರ ಬದುಕಿಂದ್ಲೇ ಹಾಗಾಗ್ತತ್ತೆ. ೧೨. ಒಂದ್ಸಲ ಹೇಳಿದ್ರೆ ನಿಮಗೆ ಗೊತ್ತಾಗೋದಿಲ್ವಾ ? ಸಹಕಾರ, ಸಹಕಾರಾಂತೀರಲ್ಲ ... ನಮ್ಮಂಥವರ ಬವಣೆ ಒಂದ್ಸಾರಿಯಾದ್ರು ಮಹಾಪ್ರಭುಗಳ ಪ್ರಜ್ಞೆಗೆ ವಿದಿತವಾಗಿಸೋಣಾಂತ ೧೩.

ಸಾಹಿತ್ಯ ಉತ್ತಮವಾಗಿದ್ದರೆ ನಿಮ್ಮನ್ನೇ ಹುಡುಕಿಕೊಂಡು ಜನ ಬರ್ತಾರೆ.... ಹೌದು, ವ್ಯಕ್ತಿತ್ವಕ್ಕೆ ಪ್ರಭುತ್ವ ತೋರಿ ಮನುಷ್ಯರಿಗೊಪ್ಪುವ ಬೌದ್ಧಿಕ ಪ್ರಭುತ್ವ ಸ್ಥಾಪನೆಯಾದಾಗ. ೧೪ ನಮ್ಮಲ್ಲಿಗೆ ಎಷ್ಟೋ ಜನ ಹೀಗೆ ಕೇಳಿಕೊಂಡು ಬರುತ್ತಾರ್ರೀ... ಬೇರೆಯವರು ಬಂದರು ಪರವಾಗಿಲ್ಲ, ಆದರೆ ನಿಮ್ಮ ಸಂಸ್ಕೃತಿ, ನಾಗರಿಕತೆಗಳ ಮೂಲಗಳನ್ನೇ ರೂಪಿಸಿದ ಬುದ್ಧಿಜೀವಿಗಳು ದೀನರಾಗಿ ಬರುವಂತಾದರೆ ಸಮಾಜ ವ್ಯವಸ್ಥೆಯನ್ನು ಕಳೆದುಕೊಳ್ಳುತ್ತಿದೆಯೆಂದರ್ಥರೀ ೧೫. ಪುಸ್ತಕಗಳ ಬಗ್ಗೆ ನೀವ್ಯಾರಲ್ಲೇ ಸಹಕಾರ ಪಡೆಯಬೇಕು ಕೇಳೋದರಲ್ಲೊಬ್ಬ ನ್ಯಾಯವಾದಿ. ನಗರವಾದ್ರೂನೂ ಸರಿಯೇ. ಪುಸ್ತಕಗಳ ಮಟ್ಟಿಗೆ ಇರುವಲ್ಲೇ ಪಡೆಯೋಕಾಗೋದಿಲ್ಲ ಸ್ವಾಮಿ ೧೬. ಅವರನ್ನು ನೀವು ಗಟ್ಟಿಯಾಗಿ ಹಿಡಿದುಕೊಳ್ಳಿ....ಶವಗಳನ್ನು ಹೇಗೆ ಹಿಡಿದುಕೊಂಡ್ರು ಪ್ರಯೋಜನ ಸಿಕ್ಕೀತಾ ಸ್ವಾಮಿ ? ೧೭. ಪ್ರಕಾಶನಕ್ಕಾಗಿ ಪಡೆದುದನ್ನು ಆಹಾರಕ್ಕಾಗಿ ಬಳಸಲೇ ಬಾರದು. ಶ್ರೀ ಸಿದ್ಧೇಶ್ವರ.ವೈದ್ಯರು, ಚಿತ್ರದುರ್ಗ– ಪ್ರಕಾಶನವೊಂದು ಸೇವೆಯಲ್ಲ, ಅಲ್ಲಿ ಶಕ್ತಿಗಳ ವಿನಿಯೋಗವಿಲ್ಲಾಂತೀರ ಅಥವಾ ಗಗನದಿಂದ ಬಂದಿರುವವರು ಮಾತ್ರವೇ ಹಾಗಿರುವ ಕಾರ್ಯ ಕೈಗೊಳ್ಳಲೀಂತೀರ ? ೧೮. ಊಟಕ್ಕೆಂದ್ರು ಜನರಲ್ಲಿ ಬೇರೆ ಸಹಾಯ ಕೇಳಿ... ಅಯ್ಯೋ, ಕಲಿಪ್ರಭುಗಳಿಂದ ಯಾವತ್ತೂ ಭೋಜನ ದೊರೆಯುವುದು ಬೇಡ ಸ್ವಾಮಿ. ಶ್ವಾಸವಿರುವವರೆಗೆ ಸತ್ಕೃತಿಗಳಿಗಾಗಿ ಸಲ್ಲುವ ಶಕ್ತಿಗಳನ್ನು ದೇವರಿತ್ತು ತನ್ಮೂಲಕ ಹಸಿವು ಹಿಂಗಿಸಿದರೆ ಸಾಕು. ೧೯. ಬಂತು ಕುರಿ, ಹೋಯ್ತು ಕುರಿ ಎಂಬಂತಾಗಿಸಿ ನಿಮ್ಮ ತಿರುಗಾಟ ಹೆಚ್ಚಿಸುವುದರಲ್ಲೇ ಬಹುಮಂದಿ ಖಿನ್ನಪಡ್ತಾರಲ್ಲ ?....ಹೌದು, ತಮ್ಮ ಬಾಳ್ವೆಯ ಸ್ವಜತೆಯನ್ನು ಸ್ಫುಟವಾಗಿ ಕಾಣಲು ಪ್ರತಿಬಿಂಬದ ಪ್ರಾಬಲ್ಯವನ್ನು ಹೆಚ್ಚಿಸುತ್ತಾರೆ. ೨೦ ತನ್ನನ್ನೇ ಆರ್ಥಿಕವಾಗಿ ಉದ್ಧರಿಸಲಾಗದವ, ಸಮಾಜೋದ್ಧಾರಕ್ಕೆ ಹೇಗೆ ಅರ್ಹನಾಗುತ್ತಾನೆ ?... ದಾರಿದ್ರ್ಯದ ಮುಂದರಿಕೆಗೆ ಜನರಲ್ಲಿ ಸದ್ಭಾವಗಳ ಲೋಪ, ಸಾಮಾಜಿಕ ಅಸಮಾನ ಸ್ಥಿತಿಗಳು ಮುಂತಾದವು ಸಹ ಕಾರಣವಾಗಬಹುದು. ಒಂದೆಡೆಯ ಕೊರತೆ ಮತ್ತೊಂದೆಡೆಯ ಪಾತ್ರತೆಯನ್ನು ನುಂಗಲಿಕ್ಕಿಲ್ಲ. ಗಂಡನಿಗೆ ಸುಖವೀಯದಿದ್ದರು ಇಂದಿರಾ ಗಾಂಧಿ ದೇಶವನ್ನಿವೀ ದೃಢತೆಯೊಡನೆ ಸಂರಕ್ಷಿಸಲಿಲ್ಲವೇ ? ೨೧. ನಿಮ್ಮ

ಅಪವಿತ್ರ ಧನವನ್ನು ಪ್ರಕಟಣೆಗಳಿಗಾಗಿ ಬಳಸುತ್ತಿದ್ದೀರಲ್ಲ — ಜನತಾ ಸಾಧ್ವ ಸುದ್ದೊಬ್ಬ ಉಪಸಂಪಾದಕರು. ಆ ಧನ ಅಪವಿತ್ರವೆನ್ನಿಸಿದ ಸಂದರ್ಭಗಳಲ್ಲಿ ಸಹ ತಪ್ಪನೊಬ್ಬನ ಬದುಕಿನ ಮುಂದರಿಕೆಗಾಗಲೀ, ಸತ್ಕಾರ್ಯಗಳಿಗಾಗಲೀ ವಿನಿಯೋಗವಾದಾಗ ತನ್ನ ಮೂಲಸಂಬಂಧಗಳನ್ನು ಕಡಿದುಕೊಳ್ಳುತ್ತದೆ. ೨೫) ನಿಮ್ಮ ಪುಸ್ತಕದಿಂದ ಏನು ಬರುತ್ತೆ ? .... ನಿಜವೇ. ವಿಲಾಸಗಳಿಗೆ ಹೋದರೆ ನಿಮ್ಮಂಥವರ ಜಾಣ್ಮೆಗೆ ಮಹಾ ಸಾಫಲ್ಯ ದೊರೆಯುತ್ತೆ. ಬಡವನ ಬರಹಗಳ ಸಂಗದಿಂದ ಅಂಥದೇನು ಸಿಗಬೇಕು ?

೨೬) ನಿಮ್ಮ ಪರಿಚಯದಿಂದ ನನಗೇನಾಗಬೇಕಿದೆ ?—ಚಿತ್ರದುರ್ಗದೊಬ್ಬ ವೈದ್ಯರು. ನಿಜಾನೇ. ರೋಗಗಳ ಪರಿಚಯ, ಸ್ನೇಹ, ಸಹವಾಸಗಳಿಂದ ನಿಮಗೆ ದುಡ್ಡು ಸಿಕ್ಕೀತು. ಲಕ್ಷ್ಮೀಪ್ರಭೆಯ ಮುಂದೆ ಸಾಹಿತ್ಯ ಬದುಕೀತೆ ? ೨೭) ನಿಮ್ಮ ಪುಸ್ತಕಗಳಲ್ಲಿ ಅಕ್ಷರಗಳು ಆಕರ್ಷಕವಾಗಿಲ್ಲ—ಶ್ರೀ ವೇದವ್ಯಾಸ ಭಟ್ಟ, ಪ್ರಾಧ್ಯಾಪಕರು, ಸಂಡೂರು. ಶಿಕ್ಷಕರಿಗೇನೇ ಆಕರ್ಷಣೆಗಳಲ್ಲಿ ಇಷ್ಟೊಂದಾಸಕ್ತಿ ಬೆಳೆದಿದ್ದರೆ ಇನ್ನು ವಿದ್ಯಾರ್ಥಿಗಳಿಗೆಷ್ಟೋ. ೨೮) ವ್ಯಕ್ತಿಯೊಬ್ಬನ ಕುರಿತು ಹೊಸ ವಿಷಯವೇನಾದರು ತಿಳಿದಾಗ ಪುಸ್ತಕದಲ್ಲದನ್ನು ನೀವು ಸೇರಿಸುತ್ತೀರಲ್ಲ—ಹೌದು, ಬರಹಗಳೆಂದರೆ ಮನಸ್ಸು ತನ್ನ ಶಕ್ಯತೆಯಿಂದ ಬೇರೆಯವರನ್ನು ತಿಳಿಯುವ ಹಾಗು ತನ್ನರಿವುಗಳನ್ನು ಜಗತ್ತಿಗೆ ನಿವೇದಿಸುವ ಪ್ರಯತ್ನಗಳೆಂದರಿಯುತ್ತೇನೆ. ೨೯) ದಕ್ಷಿಣ ಕನ್ನಡದವರ ಶ್ರಮಜೀವಕ್ಕೆ ನೀವವಮಾನ ತರುತ್ತಿರಲ್ಲ....ದುಷ್ಟಾಟ, ಮದ್ಯಪಾನಾದಿಗಳನ್ನು ನಡೆಸಬಹುದು, ಭ್ರಷ್ಟಾಚರಣೆಗಳಿಂದ ಸಂಪತ್ತು ಹೆಚ್ಚಿಸಬಹುದು. ಸಾಹಿತ್ಯಸೇವೆಯೆಂದರೆ ಮಾತ್ರ ಶಿಕ್ಷಿತರಿಗವಮಾನವಲ್ಲವೇ ? ೩೦] ನಿಮ್ಮನ್ನು ಕಳ್ಳಾಂತಾರಲ್ರೀ ? ಕಳ್ಳರು ಯಾವತ್ತಾದರು ತಮ್ಮನ್ನು ಕಳ್ಳಾಂತ ಕರೆದುಕೊಳ್ಳುವುದನ್ನು ಕಂಡಿದ್ದೀರ ? ೩೧) ಜನರಲ್ಲಿ ಜಾಗೃತಿಯನ್ನುಂಟಾಗಿಸುವ ಸಾಹಿತ್ಯವನ್ನು ನೀವು ರಚಿಸಬೇಕು.... ಛೇ, ಅಂಥ ಸಂಗೀತಗಾರನ ಪ್ರಾವೀಣ್ಯ ಈ ಮನಸ್ಸಿಗಿಲ್ಲ ಸ್ವಾಮಿ: ಆದರೇನೋ ತಿಳಿದ ರೀತಿ ಹೊಡೆದಾಗಲೀ, ಬಡಿದಾಗಲೀ ದನಗಳಲ್ಲಿ ಜಾಗೃತಿಯುಂಟಾಗಿಸಲು ಪ್ರಯತ್ನಿಸಿಯೇನಷ್ಟೆ. ೩೦) "ಏನು ಲೇಖಕರು ?" "ನಾವೆಂಥ ಲೇಖಕರು ಬುದ್ಧಿ ? ಬ್ರಹ್ಮಾಪ್ಪಿ ದೊಡ್ಡ ಲೇಖಕ. ಅವನ ಮುಂದೆ ನಾವು ಸೂರ್ಯನಿದಿರು ಮಿಂಚುಹುಳಗಳ ಹಾಗೂ ಇಲ್ಲ." ೩೧) "ಹೋ ! ಲೇಖಕರು !" "ಹುಂ,

ಅದರಲ್ಲೇ ಮುಗಿಯಿತು ಸ್ವಾಮಿ ನಮ್ಮ ಪಟ್ಟ. ಮಿಕ್ಕವರಿಡಿಗೆ ಸಹಕಾರಗಳು ದಟ್ಟ. ನಮಗೆ ಮಾತ್ರ ಕಲ್ಪನೆಯ ಬಿಟ್ಟ." ೩೨) "ಏನು ಮಾಡಿಕೊಂಡಿದ್ದೀರಿ ?" "ಏನೂ ಇಲ್ಲ ಸ್ವಾಮಿ. ನಿಮ್ಮಲ್ಲಿ ಕೆಲಸ. ನಮ್ಮಲ್ಲಿ ಕೆಲಸವಿಲ್ಲದ್ದೇ ಹೋಸೆ. ಬರೀ ನೂಕೋದೇ ದಿವಸ" ೩೩) ಹೊಟ್ಟೆಪಾಡು ಹ್ಯಾಗೆ ನಡೆಸ್ತೀರಿ ? ....ದಾರೀಲಿ ಸಿಗಲಿಲ್ಲಾಂತಾದ್ರೆ ನಿಮ್ಮಂಥೋರನ್ನೇ ಮೊರೆಹೋಗೋದು. ೩೪) "ಮದುವೆಯಾಗಿದೆಯ ?" "ಹೌದ್ರೀ, ಅಪ್ಪ, ಅಮ್ಮ, ಅಜ್ಜ ಎಲ್ಲಾರ್ದೂನೂ ಪೂರೈಸಿದೆ" "ಅಲ್ರಿ, ನಿಮ್ದು ಹೇಳಿ ?" "ನಿಜ್ವಾರೀ, ಲಗ್ನ, ಮಕ್ಕಳು ಎಲ್ಲಾಗಿದೆ." "ಯಾವಾಗ್ರೀ ?" "ಹಿಂದಿನ ಜನ್ಮದಲ್ರೀ. ನಮ್ಮ ಆವ್ರಿಗೆ ನೇಣು ಹೋಸೆಯೋ ಸ್ಥಿತಿ ಬೇಡ, ಅದಕ್ಕಿಂತ ಮುಂದಿನ ಹುಟ್ಟನ್ನೇ ಬೇಕಾದ್ರೆ ದೊರಕೆಸೋದೊಂತ ನಿಶ್ಚಯಿಸಿದೀನಿ" ೩೫) "ಅಲ್ರೀ, ನಿಮಗಾವರೆಷ್ಟು ಗೌರವ ಕೊಡ್ತಾರೀ ? ಸ್ವಲ್ಪ ನೀವವರ ಮನಸ್ಸೊಲಿಸಿದ್ರೆ ಬೇಕಷ್ಟು ಸಹಾಯ ಪಡೀಬಹುದು" "ಅಯ್ಯೋ, ಸಾಕ್ರೀ, ಹತ್ತು ರೂಪಾಯಿಯ ಕಿರಿಕಿರಿ ಹತ್ತು ತಿಂಗಳಾದ್ರು ಮುಗಿದಿಲ್ರೀ" ೩೬) ಲೋಕಕಲ್ಯಾಣದ್ದು ನೀವು ಮಾತಾಡೋದಿಲ್ವಲ್ಲ ?....ಸಹಕಾರ ಕನಿಷ್ಠಗೊಳಿಸಿ, ಹಾಗೆ ಕಣ್ಣು, ಕರ್ಣ ಮನಸ್ಸು ಹಿಗ್ಗಿಸಿ ದಾರಿದ್ರ್ಯಕ್ಕೆ ಕೆಡೆಸೋದರಲ್ಲಿ ತಾನೇ ನಿಮ್ಮ ಪಿಕ್ರಾಸು ? ಅದೇ ತಾನೆ ನವನಾಗರಿಕತೆಯ ಮೇಲ್ಮೆ ? ೩೭) "ಅದೇನು ಪ್ರಬಂಧ ಬರೀತೀರ ?" ...."ಪ್ರಬಂಧನೆಲ್ಲಿಂದು ಸ್ವಾಮೀ? ಜಾಸ್ತಿಯಿಲ್ಲ ಬರೀ ಬಂಧನಾದ್ದೆ" ೩೮) "ಯಾರಾದ್ರು ಮಂತ್ರಿಯನ್ನು ನೀವು ಹಿಡ್ಕೊಳ್ಳಿ" "ಪ್ರಜೆಗಳಿಗೆಲ್ಲ ದುರ್ಭಿಕ್ಷ ತಟ್ಟಿರುವುದು ನಿಶ್ಚಯವಾದ ಮೇಲೆ ಅವರ ಕಡೆಗೇನೆ ನಾಗೋದಷ್ಟೆ" ೩೯) "ನೀವು ವಿದ್ಯಾಲಯಗಳಿಗೆ ಭೇಟಿ ಕೊಡಿ" "ನಾಡ ನುಡಿಯಲ್ಲಿನ ಹೊತ್ತಿಗೆಗಳನ್ನು ಕೊಳ್ಳೀಡಿ, ಅವನ್ನೋದ್ಸೀಡಿ, ಅವುಗಳ ಬಗ್ಗೆ ಸಹಕಾರ ನೀಡ್ತೀಡಿ, ಬೇರೇನು ಬೇಕಾದ್ರು ಮಾಡೀಂತ ನಿಮ್ಗೆಲ್ಲ ಕಲಿಸಿಕೊಟ್ಟೋರು ತಾನೇ ಅಲ್ಲದೋದು. ೪೦) ನಾನೇನೋ ಭಾಷಾಭಿಮಾನದಲ್ಲಿ ಬಡವನಿದ್ದೋದು. ಆದರೆ ಖಂಡಿತ ಘಟನಾಲ್ಲ ಸ್ವಾಮಿ .... ಹೊಸ ಪರಿಸರದಲ್ಲಿ ಬಾಲ ಕೂರೋದಕ್ಕೂ, ಕತ್ತರಿಸೋದಕ್ಕೂ ಹೆಚ್ಚು ಹೊತ್ತೇನೂ ಬೇಕಾಗೋದಿಲ್ಲ ನೋಡಿ.' ೪೧) ಅದೇನು ತರಕಾರೀನಾ ? .... ಬಾಕಿ ಬತ್ರುಗಳೇ ಹೆಚ್ಚಾಗಿವೆ. ಇನ್ನು ತರಕ ಎನ್ನುವ ಪ್ರಿಯನ್ನು ಬೇರೆ ಹೇಗೆ ಪ್ರೇಷಿಸ್ತಿ? ೪೨) ಇನ್ನೂ ನಿದ್ದೆ ಹತ್ತಿಲ್ವಾ ಸ್ವಾಮಿ ?.... ನವಶಿಗ್ಗಹದಲ್ಲಿ ಹಾಸಿಗೆಗಳ

ಮಾಲಿನ್ಯ ನೋಡಿದರೆ ದೆವ್ವಗಳಿಗೇ ಪ್ರೀತಿಯಾಗಬೇಕು. ಅದು ಸಾಲದೆ ನಿದ್ರೆಯ ವ್ಯವಸ್ಥೆಯನ್ನು ಬೇರೆ ನೋಡಿಕೊಳ್ಳಲಿಕ್ಕೆ ಹತ್ತಿದ್ದೀರ ?

೪೩) ವಠಾರದೊಳಕ್ಕೆ ಹಾಗೆ ನುಗ್ಗೀಯಲ್ಲ ನಾಯಿ ಕಚ್ಚಿದ್ರೆ ಆಸ್ಪತ್ರೆ ಸೇರ್ಬೇಕಾಗುತ್ತೇಂತ ಗೊತ್ತಾಗದಾ ?.... ಚಿತ್ರ ದುರ್ಗದಲ್ಲೊಬ್ಬ ಶ್ರೀಮಂತ ಪ್ರಭು. ಅಷ್ಟೊಂದು ಭೀಕರತೇನಾ ಸ್ವಾಮಿ? ಇದಕ್ಕೆ ಕಾರಣವಾಗೋ ಮನಸ್ಸು ಅದೆಷ್ಟು ಭೀಕರಿದ್ದೀತು. ಅಪ್ಪಿತಪ್ಪಿ ಸಹಚರ್ಯದಲ್ಲಿ ತುಸುವಾದ್ರು ಕಚ್ಚಿ ತೂಂತಾದ್ರೆ ವೈದ್ಯಾಲಯದಲ್ಲಾದ್ರು ಗುಣವಾದೀತಾ ? ೪೪) ನೀವು ಮುಂದಿನ ಬಾರಿ ಬಂದಾಗಲಾದ್ರು ಖಂಡಿತವಾಗಿ ಬದಲಾವಣೆ ಆಗ್ಬೇಕು—ಶ್ರೀ ಗಣಪತಿ ಭಟ್, ಗೋಪಾಲ ವಿತರಣಾಲಯ, ಹೊಸಪೇಟೆ. ಹೌದು ಹಿರಿಯರೇ ಸುತ್ತೆಡೆ ವೈಚಾರಿಕವಾಗಿ ಹಾಗೆ ಜರಗಬೇಕೂಂತ ಈ ಮನಸ್ಸಿಗೂ ಬಹಳ ವಾದ ಕಳಕಳಿಯಿದೆ. ಆದರೆ ಕಲಿಮಾಯೆಯೆಂಬುದು ಬಹು ದೊಡ್ಡ ತಡೆಯಾಗಿದೆ ಯಲ್ಲ. ಅದನ್ನು ನಿವಾರಿಸಲಿಕ್ಕೆ ನೀವೇ ಏನಾದ್ರು ಶಸ್ತ್ರ ದಯಪಾಲಿಸಬಲ್ಲಿರ ? ೪೫) ಆಂಗ್ಲದಲ್ಲಿ ನೀವು ಯಾಕೆ ಬರೆಯುತ್ತೀರಿ ?.... ವಿಚಾರಗಳ ಪ್ರಸಾರವೇ ಮುಖ್ಯವಲ್ಲದೆ ಭಾಷೆಯ ಪ್ರಕಾರವಲ್ಲ. ಭಾಷೆ ಕೇವಲೊಂದು ಮಾಧ್ಯಮ ವಾಗಿರುವುದಷ್ಟೆ. ೪೬) ಕೆಲವು ಪುಸ್ತಕಗಳಿಗೆ ನೀವು ಬಹಳ ದರವಿರಿಸುತ್ತೀರಲ್ಲ.... ಬಹುಮಾನದ ಯೋಜನೆಗಳ ಪ್ರಯುಕ್ತ ಪ್ರಥಮ ಪ್ರಕಟಣೆಗಳಿಗೆ ಅಧಿಕ ಕ್ರಯವಿರಿಸಿತ್ತು. ಸದ್ಯ ರಚನೆಗೆ ತಗಲಿದ ಶ್ರಮ, ಅದರಲ್ಲಿ ನಮೂದಿತವಾದ ಅನುಭವಗಳನ್ನು ಪಡೆಯಲು ವ್ಯಯವಾದ ವಿತ್ತ, ಪ್ರತಿಗಳ ಪರಿಮಿತಿ ಮೊದ ಲಾದುವಕ್ಕೆ ಪ್ರಾಶಸ್ತ್ಯ ಕೊಡಲಾಗುತ್ತದೆ. ೪೭) ನಿಮ್ಮ ದೃಷ್ಟಿಯಲ್ಲಿ ಜೀವನಕ್ಕೆ ಭೂಷಣಗಳಾಗುವ ಸಂಗತಿಗಳಾವುವು?....ದುಸ್ಸಂಗ ಗೈಯದಿರ ಬೇಕು। ದುರುಳ ಜತೆಗೂಡದಿರಬೇಕು। ದುಷ್ಕೃಟವ ತಾಳದಿರಬೇಕು। ದುರ್ವಿ ಷಯ ಬಲೆಲಿ ಸಿಲುಕದಿರಬೇಕು। ದುಷ್ಟಹಾರಿಯನೊಡಲು ದರಿಸಿರಲು ಬೇಕು ।। ಸತ್ಕಾರ್ಯ ನಡೆಸುತಿರಬೇಕು। ಸತ್ಪಥದಿ ಸಾಗುತಿರಬೇಕು। ಸತ್ಸಂಗ ಕಲಿತಿರಲುಬೇಕು। ಸದ್ಭಾವ ಪೋಷಿಸಲುಬೇಕು। ಸಮುದಾಯ ಹಿತಗಮನ ಸೊಬಗು ತರಬೇಕು. ೪೮) ಇವತ್ತು ಸ್ವಾಗತ ಉಪಾಹಾರ ಗೃಹಕ್ಕೇನೋ ನೀವು ಹೋದ್ರು....ಹೌದು ಕಣ್ರೀ, ಕ್ರಯಕೊಟ್ಟು ಹೊಟ್ಟೆ ನೋವನ್ನೇ ಕರೆದು

ಕೊಂಡಂತಾಯಿತು. ಆ ಘಟನಾನ್ವಿತ :– ೧ ಹೊಸ ಸರಕಾರದವರು ಸಾಹಿತಿಗಳಿಗೆ ಹೆಚ್ಚಿನ ಸೌಲಭ್ಯಗಳನ್ನು ಕೊಡುತ್ತಿದ್ದಾರಂತಲ್ರೀ? ....ಹೌದು ಕಣ್ರೀ, ಬೆಂಗಳೂರು ಹಾಗು ಸುತ್ತಣವರಿಗೆಲ್ಲ ಕೊಟ್ಟಾದ ಮೇಲೆ ಮಿಕ್ಕವರಿಗೂ ತಲಪುತ್ತದೆ. ಅಷ್ಟರಲ್ಲಿ ಐದು ವರ್ಷವುರುಳುತ್ತದೆ. ಪ್ರಭುಗಳಲ್ಲಿ ಸ್ವಾರ್ಥ ಹೆಚ್ಚಿರುವಾಗ ರಾಜಕೀಯ ನಾಯಕರಲ್ಲಾದರು ಪ್ರಾದೇಶಿಕಾಭಿಮಾನ ಯಾಕಿರಬಾರದು ? ೨) ಕೋಲಾರದ ಸರಕಾರೀ ಪ್ರಭುವೊಬ್ಬರು ಹಲವು ಬಾರಿ ಅಪ್ರಾಮಾಣಿಕವಾಗಿ ವರ್ತಿಸುತ್ತಿದ್ದ ವ್ಯಕ್ತಿಗಳನ್ನು ಗುರುತಿಸಿ ಚೆನ್ನಾಗಿ ಶಿಕ್ಷಿಸಿದರಂತಲ್ಲ ಅವರ ಅಪ್ರಾಮಾಣಿಕತೆಯನ್ನು ಯಾರು ಗುರುತಿಸಿ ಯಾರು ? ಮೂಷಿಕಕಂಠಕ್ಕೆ ಘಂಟಾಬಂಧನ ಗೈಯುವರಾರು ? ೩) ಆದೊಂದೂರಲ್ಲಿ ಶುದ್ಧೀಕೃತಿಯ ಸಂಪಾದಕನೊಬ್ಬ ನಾಲ್ಕು ಬಾರಿ ಸುತ್ತಾಡಿಸಿ ಕೊನೆಗೂ ಸಹಕಾರಾನ ಇಲ್ಲಾಂತನ್ನಿಸಿದನಂತೆ....ಬೇರೆಯವರ ಶುದ್ಧೀಕರಣ ಸಾಧ್ಯವಿಲ್ಲವೆಂದು ಸಾಹಿತ್ಯಸೇವಕರ ಶುದ್ಧೀಕರಣಕ್ಕೆ ಆತ ಪ್ರಯತ್ನಿಸಿರಬೇಕು. ೩) ನಾನೊಬ್ಬ ಬಡ ಬರಹಗಾರ ಸ್ವಾಮಿ. ಮಹದೂರ ಲೋಕೇಶ್ವರರೆಂಬ ವೈದ್ಯರ ಬಳಿಗೆ ಹೋಗಿ ಸಹಕಾರ ಕೋರಿದಾಗ ಪತ್ರಿಕೆಗಳಿರಡಕ್ಕೆ ಹಾಗೆ ಕೊಟ್ಟು ವಂಚಿತನಾದೆನೆನ್ನುತ್ತ ನನ್ನ ಬಗ್ಗೆ ವಿಪರೀತ ಸಂದೇಹ ತಾಳಿದರು– ದೊಡ್ಡೂರಿನ ದೊಡ್ಡ ವೈದ್ಯರ ಶೀಲ ಪ್ರಶ್ನಿಸಲು ಸಾಧ್ಯವೆನ್ನುತ್ತೀರ ? ೪) ಕೇಳಿದಿರ ವಾರ್ತೆ, ನಾಗಾ ಉಗ್ರಗಾಮಿಗಳಿಗೆ ಮತ್ತೆಷ್ಟೋ ಜನ ಬಲಿಯಾದರಂತೆ.... ಮಾನವ ನಾಗರಿಕತೆಯಿಂದ ಅನಾಗರಿಕತೆಯೆಡೆಗೆ ಸರಿಯುತ್ತಿರುವನೆಂಬುದಕ್ಕೆ ಇಂಥವೆಲ್ಲ ಪ್ರಬಲ ಸಾಕ್ಷಿಗಳು ೫) ಸರಕಾರ ಸೀಮೆಯೆಣ್ಣೆಯ ಮೇಲಿನ ತೆರಿಗೆಯನ್ನು ಹೆಚ್ಚಿಸಿತಂತೆ....ಹಿಂದಿನಿಂದ ದೂರಲು ಪ್ರಭುಗಳು ಸಿದ್ಧರಿದ್ದಾರನ್ನಿ ೬) ಯಾವೆಡೆಯಾದರು ನಾವೇನಾದರು ಬರೆಯುತ್ತಿದ್ದರೆ ವಿಚಿತ್ರವಾಗಿ ನೋಡತೊಡಗುತ್ತಾರಲ್ಲ ಜನ.... ಅಡಿಗೆ ಗೈಯುವುದನ್ನು ಯಾರೂ ವಿಚಿತ್ರವಾಗಿ ನೋಡೋದಿಲ್ಲ. ಆದರೆ ತಿನ್ನುವುದನ್ನು ಮಾತ್ರ ಹಾಗೆ ನೋಡುವವರಿರುತ್ತಾರೆ. ಅದರಲ್ಲಿ ತಮಗೇನಾದರು ಪಾಲು ಸಿಕ್ಕೀತೋಂತ ಅವರಾಸೆ ಹಾಗೆಯೇ ತಮ್ಮ ವಿಷಯವೇನಾದರು ಬರೆಯುತ್ತಾರೇನೆಂದಿರಬಹುದು. ಬರೆಸಿಕೊಳ್ಳುವ ಆಕಾಂಕ್ಷೆ ಎಲ್ಲರಿಗಿರುತ್ತದೆ. ೭) ಪ್ರಕಾಶಕರ ಮೋಸಗಳ ಕುರಿತು ಬಹಳವಾಗಿ ದೂರುಗಳು ಕೇಳಿಬರುತ್ತಿವೆಯಲ್ಲ....ಲಭ್ಯವಿರುವ ಅತ್ಯಲ್ಪ ಸಹ

ಕಾರಣಗಳಲ್ಲಿ ನಿಯೋಜಿತ ಕಾರ್ಯಗಳನ್ನು ನಡೆಸಲು ಸಾಧ್ಯವಾಗದೆ ಹೀಗಾಗಿರಬಹುದು. ಆದರೆ ಎಷ್ಟೋ 'ಮಂದಿ ಹಣ ಕಳಿಸುತ್ತೇವೆಂದು ಆಧ್ಯತೆಯಿಂದೊಪ್ಪಿ ಬಳಿಕ ಹಾಗೆಸಗಿದರೆ, ಪುಸ್ತಕ ತಲುಪಿರುವ ಬಗೆಗಾದರೂ ಸಮ್ಮತಿಸಿದರೆ ಕಲಿಯುಗದಲ್ಲಿ ಹೂಳೆಗೇನೇ ಮಕ್ಕಳೆನಿಸಿಕೊಂಡೇವೆಂದು ಹೆದರುತ್ತಿರುವ ಸಂಗತಿ ಅನೇಕರಿಗೆ ಗೊತ್ತಿಲ್ಲ. ೮) ಆರ್ಥಿಕವಾಗಿ ಸಹಕರಿಸಲಾರೆ. ಬೇಕಾದರೆ ಲೇಖನ ಪತ್ರಿಕೆಯಲ್ಲಿ ಮುದ್ರಿತವಾಗಿಸುವೆನೆಂದು ಪತ್ರಿಕಾಪ್ರತಿನಿಧಿಯೊಬ್ಬರು ಹೇಳಿದರಂತಲ್ಲ....ಸವ್ಯವಸ್ಥೆಯ ನಿಜವಾದ ಪ್ರತಿನಿಧಿಯೇ ಸರಿ.

## ೩. ಪ್ರಚಲಿತ

೧) ಚಿಲ್ಲರೆಯ ಅಭಾವದ ಬಗ್ಗೆ ನೀವೇನನ್ನುತ್ತೀರಿ ?.... ನಾಡಿನಲ್ಲಿ ಸ್ವಾರ್ಥವೇ ಲಕ್ಷ್ಯವಾಗಿರುವ ಹಣಕಾಸು ವ್ಯಕ್ತಿಗಳು ಹಾಗು ಸಂಸ್ಥೆಗಳು ಹೆಚ್ಚಿ ಕೊನೆಗೆ ಕಾಸಿಗೂ ಗತಿಯಿರದ ಸ್ಥಿತಿಯುಂಟಾಯಿತು. ಇನ್ನು ಎಂಥದ್ದೇ ವಸ್ತುವಿರಲಿ, ವಿಕ್ರಯವಾಗುವ ಕನಿಷ್ಠ ಪ್ರಮಾಣವನ್ನು ಪ್ರಥಮ ವಿತ್ತಾಂಕಕ್ಕೆ ಹೊಂದಿಸಲಾಗುತ್ತದೆ ಮತ್ತು ವ್ಯಾಪಾರ ಲಾಭಗಳು' ಹಾಗು ಹೆಚ್ಚಿನ ಗಾತ್ರ ಅದರ ಗುಣಿತಗಳಲ್ಲಿರುತ್ತವೆಂಬ ಕಾಯಿದೆಯನ್ನು ಸರಕಾರ ಜಾರಿಗೊಳಿಸಿದುದಾದರೆ ಕಷ್ಟಗಳು ನಿವಾರಣೆಯಾದಾವೆಂದು ನೆನೆಯಬೇಕೇನೋ. ೨) ಪುಸ್ತಕಗಳನ್ನು ಕೊಳ್ಳುವ ವಿಷಯದಲ್ಲಿ ವಾಚನಾಲಯಗಳ ವರ್ತನೆಯ ಬಗ್ಗೆ ನೀವೇನನ್ನುವಿರಿ?....ಜನತಾಮಾಧ್ಯಮದ ಜಯರಾಮ ಹೆಗ್ಡೆಯವರಂಥವರೇ ಅದು ತಮಗೆ ಗೊತ್ತಾಗುವುದಿಲ್ಲವೆಂದು ಹೇಳುತ್ತಾರೆ. ದೂರದೃಷ್ಟಿ, ದೂರ ಕರ್ಣಗಳುಳ್ಳ ಪತ್ರಿಕೆಯವರೇ ಹಾಗನ್ನೋದಾದರೆ ನನ್ನಂಥವ ಯಾವ ರೀತಿ ಕಲ್ಪಿಸಿಯಾನು ? ೩) ಕೆಲವೆಡೆಗಳಲ್ಲಿ ಶಿಕ್ಷಕರು ಅಪ್ಪಿತಪ್ಪಿ ಸಹ ತಾವೀಯದೆ ವಿದ್ಯಾರ್ಥಿಗಳಿಂದಲೇ ಹಣ ಸಂಗ್ರಹಿಸುತ್ತಾರೆ ಯಾಕೆ ?....ಮುಂದೆ ಯಾವ ರೀತಿಯಲ್ಲಾದರು ಸಮಾಜದ್ದೇ ಹಣ ಕೀಳಲು ಮೂಲ ಮಾರ್ಗದರ್ಶನ. ೪) ಸರಕಾರ ಕಡಿಮೆ ವೇತನದಲ್ಲಿ ಪದವೀಧರರನ್ನು ಕಛೇರಿಗಳಲ್ಲಿ ನೇಮಿಸಿಕೊಂಡಿರುವ ಬಗ್ಗೆ ನಿಮ್ಮ ವಿಚಾರವೇನು ?....ಉದಾರ ಹಸ್ತಗಳಿಂದ ಕೆಲವು ಸಮೂಹಗಳಿಗೆ ಹೆಚ್ಚಿನ ಸೌಲಭ್ಯಗಳನ್ನೊದಗಿಸಲು ಹಲವರನ್ನು ಧಾರಾಳವಾದ ತ್ರಿಶಂಕು ಸಂಕಟಗಳಲ್ಲಿರಿಸುತ್ತದೆ. ಕೆಲವರ ಸುಖ, ಸೌಕರ್ಯಗಳ ಹೆಚ್ಚಳಕ್ಕಾಗಿ ಅನೇಕರನ್ನು ಮಿತಿರಹಿತ ಅಭದ್ರತೆ, ಅನಿಶ್ಚಿತತೆಗಳಲ್ಲಿ ನೆಲೆಗೊಳಿಸಿದೆ

೫) ಬಂಡಾಯ ಸಾಹಿತ್ಯದ ಬಗ್ಗೆ ನೀವೇನು ಹೇಳುವಿರಿ ?...ನೂತನ ವ್ಯವಸ್ಥೆಗಳ ದೈತ್ಯ ಗಾತ್ರದ ದೋಷಗಳನ್ನು ನಿರ್ಲಕ್ಷಿಸಿ ಪರಂಪರೆಯ ಇಲಿಗಳನ್ನಡಗಿಸಲು ಪರಕೀಯರೆಬ್ಬಿಸಿದ ಕೂಗನ್ನು ದಿನದಿಂದ ದಿನಕ್ಕೆ ವಿಸ್ತೃತಗೊಳಿಸುತ್ತಿದೆ. ೬) ಸಾಹಿತ್ಯವೆಂದರೆ ಹೇಗಿರಬೇಕೆಂದು ನಿಮ್ಮ ನಿಲುವು ?....ಕಾಲಿಕ ದೋಷಗಳನ್ನು ತಿದ್ದುವುದರೊಂದಿಗೆ ಯಾವತ್ತೂ ಬಾಳಬಲ್ಲ ಶಾಶ್ವತ ವಿಚಾರಗಳೊಡನೆ ಶೋಭಿಸಬೇಕು. ಮಾನವನ ನಾಗರಿಕತೆ, ಸಂಸ್ಕೃತಿಗಳಿಗೆ ಘಾತಕರವಾದುದು ಸಾಹಿತ್ಯವಾಗದು. ೭) ಪರಂಪರೆಗಳ ವಿಕೃತಿಗೊಂದು ನಿದರ್ಶನ ನೀಡಬಲ್ಲಿರ? ....ಹಿಂದೆ ತರಕಾರಿ ಇತ್ಯಾದಿಗಳನ್ನು ವಿಕ್ರಯಿಸುವವರು ಮೊದಲನೆಯದನ್ನು ಯೋಗ್ಯನಾದೊಬ್ಬನಿಗೆ ದಾನವಾಗಿ ನೀಡಿ "ಲಾಭವಾಗಲಿ" ಎಂದಾತನ ಆಶೀರ್ವಾದ ಪಡೆಯುತ್ತಿದ್ದರು. ಕಾಲಾಂತರದಲ್ಲೀ ಪದ್ಧತಿ ವಿಕೃತವಾಗಿ ಸದ್ಯ ಮೊದಲನೆಯದನ್ನೇ ಬಂದವನಿಗೆ ಮಾರಿ "ಲಾಭ ಅನ್ನು" ಎಂದು ಕೋರುತ್ತಾರೆ. ೮) ಸದ್ಯದ ಪ್ರಭುತ್ವದಲ್ಲಿ ಸರ್ವಸಾಮಾನ್ಯವಾದ ದೋಷವೊಂದನ್ನು ಉದಾಹರಿಸಿ....ಕೆಲವು ಉಪಾಹಾರಗೃಹಗಳಲ್ಲಿ ತಿಂಡಿಗಳಿಗೆ ಧಾರಾಳವಾಗಿ ಅಡಿಗೆಯುಪ್ಪನ್ನು ಬಳಸಲಾಗುತ್ತದೆ. ಮಿಕ್ಕೆಡೆಗಳಿಗಿಂತ ದರಗಳು ಬೇರೆ ಹೆಚ್ಚಿರುತ್ತವೆ. ಅಧಿಕ ಗಾತ್ರಗಳು ಜನರನ್ನು ವಂಚಿಸುತ್ತವೆ. ಒಳಗಿರುವುದೆಲ್ಲ ಬೈಹುಲ್ಲಾದರು ಸರಿಯೇ. ವಸ್ತು ದೊಡ್ಡದಾಗಿ ಕಂಡರೆ ಹಲವರಿಗೆ ತೃಪ್ತಿ. ಅದೇ ಪ್ರವೃತ್ತಿಯೊಡನೆ ಅಮಿತ ಸಂಖ್ಯೆಯಲ್ಲಿ ಜನರಾಗಮಿಸಿ ಯಜಮಾನನಿಗೆ ಸುಗ್ಗಿಯನ್ನೊದಗಿಸಿ ಮರಳುತ್ತಾರೆ. ನಿಧಾನವಾಗಿ ಹೊಟ್ಟೆಯ ನಾನಾ ತೊಂದರೆಗಳಿಗವರು ಸಿಲುಕಿದನು ಕಾರಣವನ್ನು ಅರ್ಥವಿಸಿಕೊಳ್ಳುವುದಿಲ್ಲ. ಆರೋಗ್ಯ ಪರಿಶೋಧಕರಾದರು ಇಂಥ ಪ್ರಮುಖ ವಿಷಯಗಳನ್ನು ಲಕ್ಷಿಸಿ ತಡೆಯುಂಟಾಗಿಸುವುದಿಲ್ಲ. ಕಾಯಿಲೆಯಾದವರು ಜಡಚಿತ್ತರಂತೆ ವೈದ್ಯಾಲಯಗಳನ್ನು ಸಂದರ್ಶಿಸುವುದು ನಡೆಯುತ್ತಿರುತ್ತದೆ. ಸ್ವಾಸ್ಥ್ಯಕ್ಕೇನೇ ಹಾನಿತರುವ ಆಹಾರ ಗೃಹಗಳನ್ನು ಹೆಚ್ಚಾಗಿ ಪ್ರೋತ್ಸಾಹಿಸಿಯಾರೇ ಹೊರತು ಬಹಿಷ್ಕಾರ ಸಲ್ಲಿಸುವ ಪ್ರಭುಘನತೆಯನ್ನು ತಳೆಯಲಾರರು.

## ಈ. ಸಾಮಾಜಿಕ

೧) ಈ ಪುಸ್ತಕಗಳ ಬಗ್ಗೆ ನಾವೇನು ಮಾಡ್ಬೇಕು ?....ಸಹಕರಿಸೀಂತ ಕೇಳ್ತೀನೆ ಹೊದತು ಹಣ ಕಳೆದುಕೊಳ್ಳೀಂತಲ್ಲ. ಸತ್ಕಾರ್ಯಗಳಿಗೆ ನೀಡಿಕೆ

ಬಾಳ್ವೆಯಲ್ಲಿ ಮಿಗಿಲಾದೊಂದು ಉಳಿತಾಯಂತ ತಿಳಿಯಿರಿ ೨) ನಮ್ಗೆ ಪುರು
ಸೊತ್ತಿಲ್ಲ....ಪಾತ್ರೆ ತೆಕ್ಕೊಂಡ ಕೂಡಲೇ ಇಡ್ಲಿ ತಯಾರಿಸಲೇಬೇಕೆಂಬ ನಿಯಮ
ವೇನಿಲ್ಲ ಯಜಮಾನ್ರೇ. ದೇವರು ದಯತೋಳಿ ಧಾರಾಳವಾದ ಪುರುಸೊತ್ತು
ನೀಡಿದಾಗ ಕೈಯಲ್ಲಿ ಹಣವಿರಲಿಕ್ಕಿಲ್ಲ ಅಥವಾ ಸಾವಿರ ಧನಪತ್ರ ನೀಡಿದರು
ಪ್ರಮುಖ ಕೃತಿಯೊಂದರ ಪ್ರತಿ ಸಿಗಲಿಕ್ಕಿಲ್ಲ. ೩) ನಾವು ಓದೋದಿಲ್ಲ....
ಹಾಗಲ್ಲದಿದ್ದರು ಪುಸ್ತಕಗಳ ಸಂಗ ಯಾವುದೇ ವಿಪತ್ತು ತರಲಿಕ್ಕಿಲ್ಲ ಜೊತೆಗೇ
೪) , ನಾವ್ರೋ ವಿದ್ಯಾರ್ಥಿಗಳು– ನೀಚಪಥಗಳಲ್ಲಿ ಸ್ವಚ್ಛಂದವಾಗಿ ಸಾಗಬಹುದು.
ಪುಸ್ತಕಗಳನ್ನಾದರಿಸುವುದು ಮಾತ್ರ ನೀವು ಪಡೆಯುತ್ತಿರುವ ವಿದ್ಯೆಗೆ ಘನಾಪ
ಮಾನವಲ್ಲವೇ ? ೫) ಅವರೊಬ್ಬರು ಮಹಾ ಪ್ರತಿಭಾವಂತರು....ಶಕ್ತಿಗಳನ್ನು
ಸ್ವಲ್ಪವೂ ಸವೆಸದೆ ಸಮಾಜದ ಸೊತ್ತುಗಳನ್ನು ಲಪಟಾಯಿಸೋದರಲ್ಲೇನು ?
೬) ನೀವನ್ನುವ ಸಹಕಾರಾನೇ ಈಗಿಲ್ಲ–ದೊಡ್ಡ ಬಿಳ್ಳಾಪುರದಲ್ಲೊಬ್ಬ ಸರಕಾರೀ
ಪ್ರಭು. ಸಹಕಾರವಿದೆ ಸ್ವಾಮಿ ಜನರಿಂದ ನಿಮ್ಮಂಥವರಿಗದು ನಿಮಗೇನೆ
ಗೊತ್ತಾಗದ ರೀತಿ ಪೂರ್ತಿ ಪ್ರಮಾಣದಲ್ಲಿ ದೊರೆಯುತ್ತಿದೆ. ಆದರೆ ನಿಮ್ಮದೇ
ತಾಯಿಯ, ತಾಯ್ನುಡಿಯ ಸೇವೆ ಕೈಗೊಂಡವರಿಗೆ ಮಾತ್ರ ಸಹಕಾರದಲ್ಲಿ
ದುರ್ಭಿಕ್ಷ ತಟ್ಟಿದೆ. ೭) ಅಲ್ಪ ಮೊತ್ತ ನಿಮಗೀಯಲಿಕ್ಕೂ ಜನರು ಬಹಳ
ವಾಗಿ ಸಂಶಯ ಪಡುತ್ತಾರಲ್ಲ....ಸ್ವಲ್ಪವೂ ಸಂದೇಹ ಮೂಡದ ರೀತಿಯಲ್ಲಿ.
ನೀಚ ಪ್ರವೃತ್ತಿಗಳು ಭಾರಿ ಮೊತ್ತಗಳನ್ನೇ ಕಸಿದುಕೊಳ್ಳುತ್ತಿರುವಾಗ ಜನರ
ವರ್ತನೆಗಳು ಹೀಗೆ.ವಿರುದ್ಧ ದಿಕ್ಕಿನಲ್ಲಿ ಅನ್ಯ ಜೀವನ ದರ್ಪಣಗಳ ಮೇಲೆ ವಂಚನೆ
ಗಳ ಅಸ್ತಿತ್ವಗಳನ್ನು ಕಲ್ಪಿಸುವಂಥ ಮನಗಳೊಂದಿಗೆ ತಮಗಿವೇ ನಷ್ಟಕಾರಿ
ಗಳೆಂದು ಸಹಕಾರರಹಿತವಾಗಿ ಕಾಗೆಗಳ ರೀತಿ ಕುಕ್ಕುತ್ತಾರೆ. ೮) ನಿಮ್ಮ
ಪರಿಚಯ ನನಗಿಲ್ಲದಾಗ ಮುಂಗಡ ಹೇಗೆ ನೀಡಲಿ ?.... ನಿಮ್ಮ ಭೌತಿಕ
ತಂದೆ ಅಥವಾ ತಾಯಿಯು ಅಪ್ಪ ಬಂದು ಕೇಳಿದರು ಇದೇ ರೀತಿ ಹೇಳುತ್ತೀರ ?
೯) ಆಹಾರ ವಿತರಣ ಸಂಸ್ಥೆಗಳೇ ವಿಷಗಳನ್ನು ಹಂಚತೊಡಗಿದರೆ....ಜಗತ್ತು
ಬೇಗ ವಿನಾಶದೆಡೆಗೇ ಸಾಗುತ್ತಿರುವುದೆಂಬುದಕ್ಕೆ ದೃಢವಾದ ಪುರಾವೆ. ೧೦)
ಮನುಷ್ಯರು ರಚಿಸಿದ ಸಾಧನಗಳೇ ಅವರಿಗೀಗ ಶತ್ರುಗಳಾಗಿ ಧನಾಲಯ
ಮುಂತಾದೆಡೆಗಳಲ್ಲಿ ತೊಂದರೆಗಳನ್ನು ತರತೊಡಗಿವೆಯಂತಲ್ಲ.... ಶತ್ರುಗಳನ್ನೇ
ಮಿತ್ರಗಳನ್ನಾಗಿಸಿ ಪ್ರೋತ್ಸಾಹಿಸುವರೆ ಕಾಲ ಸಂದಾಗ ರೂಪಾಂತರಗಳಲ್ಲಿ ಅವುಗಳವೇ

ಜನನವಾಗುತ್ತದೆ. ಯಂತ್ರಗಳಾದವರಷ್ಟೇನೇ. ತಾವು ವೈರಿಗಳೆಂಬ ಸುಳಿವನ್ನು ಮಾತ್ರ ದೀರ್ಘಕಾಲ ತಪ್ಪಿಯಾದವರವು ವ್ಯಕ್ತಗೊಳಿಸುವುದಿಲ್ಲ. ನೈಜ ಶೀಲವನ್ನು ಮಾನವರು ಗುರುತಿಸುತ್ತಿರುವಂತೆ ಅಪಾಯಕಾರಿ ಸಂದರ್ಭಗಳು ಹರಡಿಕೊಂಡಿರುತ್ತವೆ. ೧೧) ಬ್ರಾಹ್ಮಣರು ಸಾಮಾನ್ಯವಾಗಿ ಸಂಪತ್ತಿನಿಂದಗಲುವಾಗ ಬಹಳವಾಗಿ ಸಂಕಟಪಡುತ್ತಾರಲ್ಲ.... ಎಷ್ಟೆಂದರೂ ನಾರಾಯಣನನ್ನು ತಮ್ಮೊಡೆಯನಾಗಿ ಮನದಲ್ಲಿರಿಸಿಕೊಂಡಿರುವವರಲ್ಲವೆ ? ಆತನನ್ನು ಪತ್ನಿಯಿಂದ ಬೇರ್ಪಡಿಸಿಯಾರೆ ? ಆಕೆಯಾದರು ತನಗಿದು ಸೇರಲಿಲ್ಲವೆಂಬುದನ್ನು ಹಲವು ತೊಂದರೆಗಳುಂಟಾಗಿಸಿ ವ್ಯಕ್ತಗೊಳಿಸುವುದಿದೆ. ೧೨) ಹತ್ತು ರೂಪಾಯಿ ನೀಡಿ ಕೋಟಿ ಧನಪತ್ರ ಸಲ್ಲಿಸಿದರು ಸಿಗಲಾರದ ಸದ್ವಿಚಾರಗಳನ್ನು ಮುರುಟಿಸುವ ಪರಾಕ್ರಮದಲ್ಲಿ ಕೆಲವರು ಮುಂದರಿಯುತ್ತಾರಲ್ಲ....ಕೊಳಚೆ ದುರ್ಗಂಧ ಹರಡುವ ರೀತಿಯನ್ನು, ಹಾವು ಕಚ್ಚುವ ಸ್ವಭಾವವನ್ನು ತೊರೆದಾನಾ ? ವಿಕಾರಗಳಿಗೇನೇ ದಾಸರಾದವರು ಸನ್ಮತಿಯನ್ನು ವಿಕಸಿಸಗೊಟ್ಟಾರಾ ? ಎಂಥ ರೀತಿಯ ಸಾಮ್ರಾಜ್ಯ ತಮ್ಮದಾಗಿರಬೇಕೆಂಬುದನ್ನು ಅರ್ಥವಿಸದಿರುವ ಮೂಢರಿಗೇನೇ ಪ್ರಭುತ್ವವಿಂದು ದೊರಕಿ ಸಮಸ್ಯೆಗಳನ್ನು ಪರಿಪುಷ್ಟ ಗೈಯುತ್ತಿವೆಯೆಂಬುದು ನಿಚ್ಚಳ. ಮೋಸಗಳ ಸಂಗ ಮನುಷ್ಯಾಭಿಮಾನ ಮುರುಟಿಸದಿರಲಿಕ್ಕಿಲ್ಲ. ದುರ್ವಿಷಯಗಳ ಸತತ ಸಹವಾಸ ಮೂಲಬುದ್ಧಿಯನ್ನು ಕುಂದಿಸಿರುವ ಪರಿಣಾಮಗಳಿವು.

## ೮. ವೈಚಾರಿಕ

೧) ವ್ಯಕ್ತಿ, ವ್ಯಕ್ತಿಗಳ ನಡುವಿರುವ ಹೋಲಿಕೆ, ವ್ಯತ್ಯಾಸಗಳು ಯಾವುವು ?.... ಎಲ್ಲರ ಶರೀರಗಳೂ ಪಂಚಭೂತ, ಸಪ್ತಧಾತುಗಳಿಂದ ವಿರಚಿತವಾಗಿರುತ್ತವೆ. ಎಲ್ಲರ ಮನಸ್ಸುಗಳೂ ಭಾವ, ಕಲ್ಪನೆ, ವಿಚಾರ ನಾನಾ ಪ್ರವೃತ್ತಿಗಳಿಂದ ಕೂಡಿರುತ್ತವೆ. ಆದರೆ ಹಲವರು ಅಂತರ್ಗತ ವಿಕಾರಗಳಿಗೆ ವಶರಾಗಿ ದೇಹಕ್ಕೆ, ಭೌತಿಕ ಪರಿಸರಗಳಿಗೆ ಸಮೀಪರಾಗುತ್ತಾರೆ. ಕೆಲವರು ಸದ್ವಿಚಾರಗಳನ್ನು ಗೌರವಿಸಿ ಆತ್ಮ, ಪರಮಾತ್ಮರಿಗೆ ಸಮೀಪಸ್ಥರಾಗುತ್ತಾರೆ. ಗುಣಾಂತರಗಳಿಗೆ ಆಧಾರಭೂತವಾದ ತುಲನೆ, ಭೇದಗಳಿವು.

೨) ಕನಸುಗಳನ್ನು ಹೇಗೆ ಅರ್ಥವಿಸಬಹುದು ? ಹೆಚ್ಚಿನವು ಗಾಯಗಳ ರೀತಿ ಕಾರಣವನ್ನು ಸ್ಪಷ್ಟಪಡಿಸುತ್ತವೆ. ಆದರೆ ಮತ್ತೆ ಕೆಲವು ಮಿಗಿಲೊತ್ತಡವನ್ನು ತಳೆದ ಒಳನೋವುಗಳು ತಮ್ಮನ್ನು ಪ್ರಕಟಗೊಳಿಸಿದಂತಿದ್ದು-

ಅವನ್ನು ತಿಳಿಯಲು ಸಂಕೀರ್ಣವಿಧಗಳ ವಿಶ್ಲೇಷಣೆಗಳು ಅಗತ್ಯವೆನ್ನಿಸುತ್ತವೆ. ಸುಪ್ತ ಪ್ರಜ್ಞೆಯಲ್ಲಿ ಹುದುಗಿಕೊಂಡ ಪ್ರಬಲಭಾವನೆಗಳ ಬಗ್ಗೆ ಗೊತ್ತಾಗದೆ ಅವುಗಳ ಶಿರ, ಪಾದಗಳನ್ನು ಗ್ರಹಿಸಲು ಸಾಧ್ಯವಾಗುವುದಿಲ್ಲ. ೩) ನಿಮ್ಮ ಪ್ರಕಟಣೆಗಳಲ್ಲಿ ನಿಯಮಬದ್ಧತೆ ಗೋಚರಿಸುವುದಿಲ್ಲ....ಸ್ವಲ್ಪ ವಸ್ತುಗಳನ್ನು ಚೊಕ್ಕಟವಾಗಿ ಬಡಿಸಿದಾಗ ಮನಸ್ಸಿಗೇನೋ ಹರ್ಷವುಂಟಾಗುತ್ತದೆ. ಆದರೆ ಹೊಟ್ಟೆ ಮಾತ್ರ ತುಂಬದೆ ಸ್ವಲ್ಪ ಹೊತ್ತಿನಲ್ಲೇ ಹಸಿವು ಕಾಡತೊಡಗುತ್ತದೆ. ಸತ್ವಸ್ಥಕಾರದ ಕೊರತೆಯಿಂದಾಗಿ ಹಿರಿತಟ್ಟೆ ತೆರವಾಗದೆ ಕಿರುತಟ್ಟೆಯಲ್ಲೇ ಅಧಿಕಾಹಾರಗಳ ನೀಡಿಕೆಯಂತೆ. ಲಘುಗಾತ್ರವಲ್ಲದ ಕೃತಿಯೊಂದು ಹೆಚ್ಚಿನ ವಿಚಾರಾರ್ಪಣೆಗಳನ್ನು ತಳೆದಿರಬೇಕೆಂಬುದು ಈ ಮನದ ಕಾಂಕ್ಷೆ. ಅಂಥ ಗುರಿಯನ್ನು ಸಾಧಿಸುವ ಪ್ರಯತ್ನ ನಿಮ್ಮ ದೃಷ್ಟಿಯಲ್ಲಿ ನ್ಯೂನವಾಗಿ ಕಂಡಿದೆ. ೪) ಮೊಹಮ್ಮದೀಯರು ಬಹಳಷ್ಟು ಹಿಂಸಕ ರೀತಿಗಳಲ್ಲಿ ಧರ್ಮವನ್ನು ಪ್ರಸಾರ ಗೈದವರಲ್ಲವೇ ?.... ಅದು ಕೆಲವರು ಹಿಡಿದ ತಪ್ಪು ದಾರಿಯಷ್ಟೇ. "ಬಲವಂತವಾಗಿ ಯಾರ ಮೇಲೂ ಧರ್ಮವನ್ನು ಹೇರಬಾರದು. ಆ ಬಗ್ಗೆ ಯಾರನ್ನೂ ಶಿಕ್ಷಿಸಬಾರದು, ನೋಯಿಸಬಾರದು. ಬೋಧಿಸುವ ಕಾರ್ಯವನ್ನು ಮಾತ್ರವೇ ನೀನು ಮಾಡಬಹುದು. ಶಿಕ್ಷಿಸುವ ಕೆಲಸ ನನ್ನ ಹೊಣೆ. ವಿಶ್ವಾಸಿಗಳು ಮತ್ತು ಅವಿಶ್ವಾಸಿಗಳ ನಡುವಿನ ಭಿನ್ನಾಭಿಪ್ರಾಯಗಳನ್ನು ಕೊನೆಯ ದಿನ ತೀರ್ಮಾನ ಗೈಯುವವ ನಾನು" ಎನ್ನುವಂತಹ ವಾಕ್ಯಗಳು ಅವರ ಪವಿತ್ರ ಗ್ರಂಥವಾದ ಖುರ್ಆನಿನಲ್ಲೇ ಉಕ್ತವಾಗಿವೆ. ಆದ್ದರಿಂದವರಲ್ಲಿ ಹಿಂಸೆ, ಅತ್ಯಾಚಾರ, ರಕ್ತಪಾತಗಳನ್ನು ನಡೆಸಿ ಮೇಲ್ಮೆಯನ್ನು ಸ್ಥಾಪಿಸಲೆನ್ನುವ ಯತ್ನಗಳನ್ನು ನಡೆಸುವವರು ತಮ್ಮ ಧರ್ಮದ ಮೂಲಕ್ಕೇನೇ ವಿಮುಖರಾದವರೆಂಬುದು ನಿಸ್ಸಂದೇಹವಾದ ಸಂಗತಿಯಾಗಿದೆ. ೫) ಪುಸ್ತಕ ಓದಬೇಕೆಂದರೆ ನಾನೀಗ ವಿದ್ಯಾಭ್ಯಾಸ ಗೈಯುತ್ತಿಲ್ಲ—ಬಿಟ್ಟ ವೈದ್ಯರು. ಹೋ ! ವಿದ್ಯೆ ಪ್ರಾಪ್ತಿಸಿ ಅವಿದ್ಯೆಯನ್ನೀಗ ಅಭ್ಯಾಸ ಗೈಯಲಿಕ್ಕೆ ತೊಡಗಿದ್ದೀರೇನೋ. ಮತ್ತೆ ವಿಚಾರವೆಂದರೇನೇ ವಿರೋಧಿಯಾಗಿರಬೇಕಲ್ಲ ?

## ಊ. ತಾತ್ತ್ವಿಕ

೧) ತಾನೊಬ್ಬ ಬರಹಗಾರನೆಂಬುದನ್ನು ಕೂಡ ನೀವೊಪ್ಪಲಾರಿರಲ್ಲ... ಹೌದು. ಆದರೆ ಕರ್ಮವಿಂದಾಗ ಗಣಜೀವಿಗಳ ಬಳಿಗೆ ಸಾಗಬೇಕಾದಾಗ

ಹಾಗೆ ಪುಂಗಿಯೂದುತ್ತಿರಬೇಕಾಗಿದೆ. ವಾಸ್ತವತಃ ಪ್ರಕೃತಿಯೇ ಭಾವ, ವಿಚಾರಗಳ ವೈವಿಧ್ಯಪೂರ್ಣ ಸಮೂಹಗಳನ್ನು ಮನಗಳ ಮೇಲೆ ಬರೆಯುತ್ತಿದೆ. ಅದಕ್ಕೆ ಸಾಟಿಯಾದ ಮತ್ತೊಬ್ಬ ಬರಹಗಾರನಿಲ್ಲ. ಮನಸ್ಸು ಕೇವಲ ಜಗತ್ತಿನಿಂದ ದೊರೆತ ಭಾಷಾದರ್ಪಣದ ಮೂಲಕ ಪ್ರಕೃತಿಯ ಲೇಖಗಳನ್ನು ಸಾಕಾರಪಡಿಸಿಕೊಳ್ಳುವುದಷ್ಟೆ. ಮೂಲಕ್ಕಿಂತ ಈ ಕ್ರಿಯೆಗೇನೇ ಅಧಿಕ ಮಾನ್ಯತೆಯಿರೆಯುವುದಾದರೆ ಅಂತರಂಗವನ್ನು ನುಡಿಗಿಳಿಸುವ ಪ್ರತಿಯೊಬ್ಬ ವ್ಯಕ್ತಿಯನ್ನೂ ಲೇಖಕನೆನ್ನಬಹುದು. ೨) ಸೃಷ್ಟಿಯಲ್ಲಿ ದರ್ಪಣತತ್ತ್ವ ಹೇಗೆ ಕಾರ್ಯವೆಸಗುತ್ತದೆ ? .... ಕನ್ನಡಿ ಶರೀರವನ್ನು ಪ್ರತಿಬಿಂಬಿಸುತ್ತದೆ. ಶರೀರ ಆತ್ಮವನ್ನು, ಆತ್ಮ ಪರಮಾತ್ಮನನ್ನು ಪ್ರತಿಬಿಂಬಿಸುತ್ತದ. ಮತ್ತೊಂದು ಕಡೆ ನಡೆ, ನುಡಿಗಳು, ಮನಸ್ಸನ್ನು, ಮನಸ್ಸು ಪ್ರಕೃತಿಯನ್ನು, ಆ ಪ್ರಕೃತಿ ಸರ್ವಶ್ರೇಷ್ಠನಾದ ಪರಬ್ರಹ್ಮನನ್ನು ಪ್ರತಿಬಿಂಬಿಸುತ್ತಿವೆ. ೩) ದೇವರು ಸಾಕಾರಿಯೋ, ನಿರಾಕಾರಿಯೋ ?....ಶಕ್ತಿ ಮೂಲತಃ ನಿರಾಕಾರವಾದುದು. ಆದರೆ ಮನುಷ್ಯನದನ್ನು ತನ್ನ ಬಾಳ್ವೆಯ ಸೌಕರ್ಯಗಳಿಗಾಗಿ ತೋರುವಂಥ ನಾನಾ ಕಾರ್ಯಗಳಿಗೆ ಪರಿವರ್ತಿಸಬಹುದು. ಅದೇ ರೀತಿ ಭಗವಂತ ಮೂಲತಃ ನಿರಾಕಾರನಾದರು ಸೀಮಿತ ಮತಿಗಳ ಗ್ರಹಣಕ್ಕೆ ಲಭ್ಯವಾಗುವ ಹಾಗೆ ನಲ್ಮೆಯಿಂದ ಯಾವಾಕಾರದಲ್ಲಿ ಬೇಕಾದರು ವ್ಯಕ್ತನಾಗಬಹುದು. ಭಕ್ತಿ ತುಂಬಿದ ಮನಸ್ಸು ಅದಿದೆಂಬ ಭೇದವಿರದೆ ಯಾವ ರೂಪದಲ್ಲಿ ಬೇಕಾದರು ಪರಮಾತ್ಮನನ್ನು ಗುರುತಿಸಬಹುದು.

೪) ಬ್ರಾಹ್ಮಣರು ನೂರು ತಂದೆಯರನ್ನು ಪಡೆದಂತೆ ತೋರುವುದಲ್ಲ— ವಿಜಯಪುರದಲ್ಲೊಬ್ಬ ವ್ಯಾಪಾರಿ. ಹೌದು ಸ್ವಾಮಿ, ಹಿನ್ನೆಲೆಯಿಂದ ನಿಮಗೆ ಗೊತ್ತಾಗದಂತೆ ನಿಮ್ಮ ಲಾಭಗಳನ್ನಾದರು ಸಾವಿರಾರು ಗಣನೆಗೆ ಕಡಿಮೆಯಾಗದಷ್ಟು ಮಂದಿಗಳು ಪೋಷಿಸುತ್ತಿದ್ದಾರೆ. ನೀವು ಮಾನಿಸದಿದ್ದರು ಸರಿಯೇ, ವಾಸ್ತವಿಕವಾಗಿ ನಿಮ್ಮ ಬಾಳ್ವೆಗೆ ಅವರಲ್ಲಿ ಪ್ರತಿಯೊಬ್ಬನೂ ಒಬ್ಬೊಬ್ಬ ತಂದೆಯೇ. ೫) ಒಬ್ಬ ವ್ಯಕ್ತಿಗೇನೇ ಹಲವರು ತಂದೆಯರು ಹೇಗಿರುತ್ತಾರ್ರೀ ?.... ವಿವಿಧ ಜನ್ಮಗಳ ಸರಣಿಯಲ್ಲಿ ನೈತಿಕವಾಗಿಯೇ ಹಾಗಿರಲಿಕ್ಕೆ ಸಾಧ್ಯ. ಅದೇ ರೀತಿ ಭೌತಿಕವಾಗಿ ಭಿನ್ನ ರೂಪಗಳನ್ನು ಧರಿಸಿದ್ದರು ಹಿಂಗಡೆ ಪಿತನೊಬ್ಬನೇ ಮೆರೆಯುತ್ತಿರಲು ಸಾಧ್ಯ. ೬) ಬ್ರಾಹ್ಮಣರಿಗೆ ಸ್ವಂತ ತಂದೆಯಿಲ್ಲ. ನಮ್ಮ

ತಾಯಿಯನ್ನು ಕೂಡ ತಮ್ಮ ತಂದೆಯೆಂದವರು ಕರೆಯುತ್ತಾರಲ್ಲ—ವೀರಶೈವರಲ್ಲಿ ಕೆಲವರಾರೋಪ. ನಿಜ; ಸೃಷ್ಟಿಯ ಪರಮ ಸತ್ಯದ ಸುಳಿವೊದಗದವರು ಹೀಗೆ ಹೀಯಾಳಿಸುತ್ತಾರೆ. ಆದರೆ ನಿಜವಾಗಿ ಅಂಥವರಿಗೆ ತಮ್ಮ ಹಿಂ ತಂದೆ ಯಾರು, ಆತನ ಶಕ್ತಿ, ವ್ಯಾಪಕತೆಗಳೇನು ಎಂಬುವರ ಬಗೆಗೇನೇ ತುಸುವಾದರು ಪರಿಜ್ಞಾನವಿಲ್ಲ. ಆತನ ಬದಲು ತಮ್ಮಂತೆ ಮಿತಿಗೊಳಪಟ್ಟು ಭವದಲ್ಲಿ ತೊಳಲುತ್ತಿರುವವನೊಬ್ಬನನ್ನು ತಂದೆಯೆಂದವರು ಭ್ರಮಿಸಿದ್ದಾರೆ. ಆತ ಖಂಡಿತವಾಗಿ ಜಗದೊಡೆಯನಲ್ಲ. ಮನುಷ್ಯರಂತೆ ಪ್ರಾಕೃತಿಕ ಗುಣಗಳಿಗೆ ದಾಸನಿದ್ದು ಲೋಕದಿಂದ ಪ್ರತ್ಯೇಕಗೊಳಿಸುವ ವಿಶಿಷ್ಟ ಪ್ರಕಾರಗಳ ನಾಮ ಹಾಗು ರೂಪಗಳಿಗೆ ತನ್ನನ್ನು ಬದ್ಧವಾಗಿರಿಸಿಕೊಂಡವ. ನಚ್ಚಿನಂತರದಲ್ಲಿ ನಿರಾಕಾರದ ಹುತ್ತದೊಳಗಿಂದ ತಪ್ಪಿ ಸಹ ಹೊರಬರುವಷ್ಟು ಶಕ್ತಿಯಾದರು ಆತನಿಗಿಲ್ಲದಿರಬಹುದು. ಪರಿಮಿತಿಗಳ ಕಾರಾಗೃಹದಲ್ಲಿರುವವನೊಬ್ಬನನ್ನು ಜಗದೊಡೆಯನೆಂದು ವಿಶ್ವಾಸ ತಾಳಿದ ಪಾಪಾಯಿತು. ಗಣರಾಜ್ಯದೊಂದು ವೈಚಿತ್ರ್ಯಪೂರ್ಣ ವಿದ್ಯಮಾನವೇ ಸರಿ. ೭) ಶೈವರೂ ನಿಮಗೆ ಗುರುಗಳಾಗುತ್ತಾರೆ. ವೈಷ್ಣವ ಸ್ವಾಮಿಗಳೂ ಗುರುಗಳಾಗುತ್ತಾರೆ. ಇದೆಂಥ ರೀತಿ?... ಈಗಿನ ನಾಗರಿಕರು ಧಾರ್ಮಿಕ ಶೀಲಗಳನ್ನೇ ತ್ಯಜಿಸುವ ಭ್ರಷ್ಟರನ್ನು, ಚೋರ, ವೇಶ್ಯಾಪುತ್ರರಂತಿರುವವರನ್ನು ಸಹ ತಮ್ಮ ಮಾರ್ಗದರ್ಶಕರಾಗಿಸಿಕೊಂಡು ವ್ಯವಹರಿಸುತ್ತಿರುವುದು ಗೋಚರಿಸುತ್ತಿದೆಯಲ್ಲ. ಆ ಬಗ್ಗೆ ನಿಮ್ಮಂಥವರಲ್ಲಿ ಪ್ರತಿಭಟನೆಯ ಸುಳಿವಾದರು ತಲೆದೋರುತ್ತದು. ಆದರೆ ಶೈವನಿರಲಿ, ವೈಷ್ಣವನಿರಲಿ ಘನಗುಣಗಳನ್ನು ತಳೆದವರಿಗೆ ಮಾತ್ರ ತಲೆಬಾಗಿದರೆ ತಪ್ಪು. ಕಲಿಯೇ ಬುದ್ಧಿಯನ್ನು ಗೆದ್ದಿರುವ ಸ್ಥಿತಿಯಿದಲ್ಲದೆ ಬೇರೇನಲ್ಲ. ೮) ಜಗತ್ತಿನಲ್ಲಿ ನಡೆಯುತ್ತಿರುವ ಅನ್ಯಾಯಗಳನ್ನು ಕಂಡಾಗ ದೇವರಿಲ್ಲವೆಂದೇ ಹೇಳಬೇಕಾಗುತ್ತದೆ—ಶ್ರೀ ಟಿ. ಕೃಷ್ಣಮೂರ್ತಿ ಕವಿ, ಕೀರ್ತನೆಕಾರರು ಮತ್ತು ಲಾವಣಿಕಾರರು, ಶಿಡ್ಲಘಟ್ಟ. ದೇವರಿದ್ದಾನೆಂಬುದಕ್ಕೆ ಪ್ರಾರಂಭವೇ ಸಮರ್ಥನೆಯಾಗಿದೆ. ಇದಿರುವಂಥ ವಸ್ತುವನ್ನು ಯಾರಾದರೊಬ್ಬ ಯಾವಂದು ಸಹ ಹೆಸರೊಂದಿರಿಸಿ ಗುರುತಿಸಲು ಸಾಧ್ಯವಿಲ್ಲ ಸ್ವಾಮಿ. ಹಾಗೆ ಗೈದರೆ ನಿಕ್ಕವರು ಸಮ್ಮತಿಸಲಾರರು. ಅಂಥ ಪದ ಬೇಗನೆ ಗಗನಕ್ಕೋಡೀತು. ಆದರೆ ಸಾವಿರಾರು ವರ್ಷಗಳ ದೀರ್ಘ ಪರಂಪರೆಯಲ್ಲಿ ಪ್ರಾಬಲ್ಯ ಪಡೆದು ಬಾಳುವ ಸ್ಥಾನ ದೇವ

